**ಕಾರಣಾಗಮದಲ್ಲಿ**

# ಮಹಾಪಾಶುಪತ ವಿಧಾನ

**ಅರ್ಥಾತ್**

# ಅನಾದಿ ವೀರಶೈವ ವಿಧಾನ

ಮತ.
ದ್ಧಾಂತಿಕ
ಪಶುಪತಿ
ನಲ್ಲದೆ ಬೇರೆ
ುದ್ರನೇ ಆಗಿದ್ದಾನೆ.
ಹಚ್ಚಿದಾತ ರುದ್ರ
ಸುವ ತ್ರಿವಿಧ ದೀಕ್ಷೆ
ಸೂರ್ಕ್ಷತ್ರಯಗಳನ್ನು ಪರಿ
ಡಾ|| ಾದಲು ಮಾಡಿದಾತ
ಯನ್ನು ಬೋಧಿಸಿ

ಪ್ರಕಾಶಕರು :

ಶ್ರೀಶೈಲ ಜಗದ್ಗುರು ನಿಡುಮಾಮಿಡಿ ನಿವಾಸ,
೪೯, ಹ. ಬ. ಸಮಾಜ ಬೀದಿ
ಬಸವನಗುಡಿ, ಬೆಂಗಳೂರು-೪

ಸೇವಾಕರ್ತರು :

ಶ್ರೀ ಯಜಮಾನ್ ಕೆಂಚಪ್ಪನವರು, ಇವರ ಧರ್ಮಪತ್ನಿ
ಶ್ರೀಮತಿ ಗೌರಮ್ಮನವರು, ಗಾಂಧಿನಗರ, ಬೆಂಗಳೂರು.

ತನ ಹೊತ್ತಗೆಯುವರದು
ಒಂದುಸಾವಿರ ಪ್ರತಿಗಳು

ು :

ಪ್ರಿಂಟಿಂಗ ಪ್ರೆಸ್, ಗದಗ
ದೂರವಾಣಿ : ೮೧೮೧

## ಮುಮ್ಮಾತು :

ವೀರಶೈವ ಮತದ ಮೂಲ ಪಶುಪತಿಮತ. ಪಶುಪತಿ ರುದ್ರನಲ್ಲದೆ ಪಾರ್ವತೀಪತಿ ಶಿವನಲ್ಲ. ವಾಚ್ಯವಾಗಿಯೂ ಸೂಚ್ಯವಾಗಿಯೂ ರುದ್ರನೇ ಪಶುಪತಿ ! ರುದ್ರ ಬೇರೆ, ಶಿವ ಬೇರೆ ! ರುದ್ರನು ಅನಾದಿ ವೃಷಭ ವಾಚ್ಯನೂ ಅಹುದು. ಋಗ್ವೇದ ರುದ್ರನನ್ನು 'ವೃಷಭ'ನೆಂದೆ ನಿರೂಪಿಸಿದೆ. ವೃಷಭನೆಂದರೆ ಸರ್ವ ಶ್ರೇಷ್ಠನೆಂದರ್ಥ. ಯೌಗಿಕವಾಗಿ ರುದ್ರನಿಗೆ ಮುಮ್ಮೊದಲು ವೃಷಭ ಪದ ನಿರೂಪಿತವಾಗಿದೆ.

ರುದ್ರನೇ 'ಪಶುಪತಿ'ಯೆಂಬುದನ್ನು ಹರಪ್ಪ ಮೊಹೆಂಜೋದಾರೊಗಳ ಉತ್ಖನನದಲ್ಲಿ ದೊರೆತ 'ಪಶುಪತಿರುದ್ರ'ನ ಭಾವಚಿತ್ರ ಸಿದ್ಧಪಡಿಸುತ್ತದೆ. ಹರಪ್ಪ ಮೊಹೆಂಜೋದಾರ ಸೈಂಧವ ಸಂಸ್ಕೃತಿಗೆ ಮೂಲಕಾರಣ ಪಶುಪತಿ ರುದ್ರ ದೇವನು. ಇದರಿಂದ ಆತನಿಂದಾದ ಪಾಶಪತಮತದ ಪ್ರಾಚೀನತೆ ವೆಗ್ಗಳ ವಾಗುತ್ತದೆ.

ವೀರಶೈವಕ್ಕೂ ಶೈವಕ್ಕೂ ಷಡ್‌ದರ್ಶನಗಳಿಗೂ ಮೂಲ ಪಶುಪತಿಮತ. ಇದು ಪ್ರಾಚೀನವೂ ಅಹುದು; ಪ್ರತಿಭಾನ್ವಿತವೂ ಅಹುದು. ತಾತ್ವಿಕ ಸೈದ್ಧಾಂತಿಕ ವಿಕಾಸ ಪಶುಪತಿಮತದಿಂದ ಪ್ರಾರಂಭವಾಗುತ್ತದೆ. ಅಂತಹ ಪಶುಪತಿ ಮತದ ಉತ್ಪಾದಕ ಮತ್ತು ಸಂಸ್ಥಾಪಕ ಅನಾದಿ ರುದ್ರದೇವನಲ್ಲದೆ ಬೇರೆ ಯಾರು ಇಲ್ಲ. ಮಾನವೀಯ ಸಂಸ್ಕೃತಿಯ ಕೇಂದ್ರನೂ ರುದ್ರನೇ ಆಗಿದ್ದಾನೆ. ಪಶುಗಳಂತೆ ವರ್ತಿಸುತ್ತಿದ್ದ ಮಾನವರನ್ನು ಪತಿಧರ್ಮಕ್ಕೆ ಹಚ್ಚಿದಾತ ರುದ್ರ ದೇವ ! ತ್ರಿಮಲವೆಂಬ ತ್ರಿವಿಧಪಾಶಗಳನ್ನು ಪರಿಹರಿಸುವ ತ್ರಿವಿಧ ದೀಕ್ಷೆಗಳನ್ನು ಕಂಡಾತ ರುದ್ರದೇವ ! ತ್ರಿಮಲಗಳೆಂಬ ಪಾಶತ್ರಯಗಳನ್ನು ಪರಿಹರಿಸಿ ಪತಿ (ಲಿಂಗ) ಧರ್ಮವನ್ನು ಪರಿಪಾಲಿಸುವಂತೆ ಮೊದಲು ಮಾಡಿದಾತ ರುದ್ರದೇವ ! ಸಾಮಾನ್ಯ ಮಾನವರಿಗೆ ಮಾನವ ಸಂಸ್ಕೃತಿಯನ್ನು ಬೋಧಿಸಿದಾತ ಶ್ರೀ ರುದ್ರ.

"ರುದ್ರ ಎಂಬ ಹೆಸರು ಸಂಸ್ಕೃತಿಯ ಸ್ಫೂರ್ತಿ ಕೇಂದ್ರವಾಗಿದೆ. ಸ್ಕಂದ ನೆಂಬುದು ಕೂಡ ರುದ್ರನ ಒಂದು ಮುಖ. ಸ್ಕಂದ ಇಲ್ಲವೆ ಕುಮಾರ ಎಂಬುದು ರುದ್ರಮತದಲ್ಲಿ ಇನ್ನೊಂದು ಮಹತ್ವದ ಅಷ್ಟೇ ಉತ್ತುಂಗ ಶೃಂಗರೂಪ ವಾಗಿದೆ. ಈತನು ತೈಜಸನೆಂದು ಋಗ್ವೇದವು ವರ್ಣಿಸುತ್ತದೆ. ಈತನು ರುದ್ರ ಮತದಲ್ಲಿ ಆದೇಕೆ ಮಾನವ ಕುಲದಲ್ಲಿ ಅವತರಿಸಬೇಕಾಗಿದ್ದವನೆಂದೂ ಮಾನವ ಕುಲವು ಅವನ ಬರವಿಗಾಗಿ ಕಾದಿತ್ತೆಂದೂ ಋಗ್ವೇದದ ಮಂತ್ರವೊಂದಕ್ಕೆ ಟಿಪ್ಪಣಿ ಯನ್ನು ಬರೆಯುತ್ತ ಲುಡ್ವಿಗ್ ಹೇಳಿದ್ದಾರೆ. "ಆತನನ್ನು ಮಾನವಕುಲದ ಉಕ್ಕಿನ ಅಥವಾ ಬಲಶಾಲಿಯಾದ ಮಾನವನೆಂದು ವರ್ಣಿಸಲಾಗಿದೆ....." ಎಂದು ಶ್ರೀ ವ್ಹಿ. ಎಸ್. ಕಂಬಿ, ಎಂ. ಎ; ಬಿ. ಎಡ್. ಇವರು ತಮ್ಮ "ವೀರ ಶೈವದರ್ಶನ ಮೀಮಾಂಸೆ" ಎಂಬ ಪುಸ್ತಕದ ಮುನ್ನುಡಿಯಲ್ಲಿ ಉಲ್ಲೇಖಿಸಿ ದ್ದಾರೆ. ಇವರು ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದ ವೀರಶೈವಶಾಸ್ತ್ರ ಕನ್ನಡ ಅಧ್ಯಯನ ಪೀಠದ ಹಿರಿಯ ಸಂಶೋಧಕ ಸಹಾಯಕರಾಗಿ ಕೆಲಸ ಮಾಡುತ್ತಿದ್ದಾರೆ.

ಮುಮ್ಮೊದಲು ಅಂದರೆ ಅನಾದಿ ಕಾಲದಲ್ಲಿ ಕಾಡ ಕವಿಲೆಗಳನ್ನು ಹಿಡಿ ತಂದು ಸಾಕಿ ಸಲುಹಿ ಮಾನವ ಜೀವನೋಪಯೋಗಿಗಳನ್ನಾಗಿಸಿದಾತನು ಶ್ರೀ ರುದ್ರದೇವನು. ಇದರಿಂದ ಆತನಿಗೆ ಮುಮ್ಮೊದಲು 'ಪಶುಪತಿ'ಪದ ವಾಚ್ಯವಾ ಗಿತ್ತು. ಬರಬರುತ್ತ ಪಶುತ್ವವನ್ನು ಮಾನವರಲ್ಲಿಯೂ ಕಂಡುಕೊಂಡು, ಮಾನವ ರನ್ನು ಪಶುಧರ್ಮದಿಂದ ಪತಿಧರ್ಮಕ್ಕೆ ತರುವನು. ಇದರಿಂದಾಗಿ ಅದು ಆತನಲ್ಲಿ ಸೂಚ್ಯಾರ್ಥಪ್ರದವೂ ಆಯಿತು.] ಪತಿಧರ್ಮವೆಂದರೆ ವೀರಶೈವ ಧರ್ಮ. ತ್ರಿವಿಧ ಮಲ ಪಾಶಗಳನ್ನು ಪರಿಹರಿಸಿ ತ್ರಿವಿಧ ಪತಿಧರ್ಮಗಳನ್ನು ಅಂದರೆ ಲಿಂಗಧರ್ಮಗಳನ್ನು ತ್ರಿವಿಧಾಂಗಗಳಲ್ಲಿ ಅಳವಡಿಸುವನು. ಲಿಂಗಧಾರಣ ಧರ್ಮವನ್ನು ಪ್ರಚಾರಕ್ಕೆ ತರುವನು. ಇದನ್ನು ಅನುಸರಿಸುವವರೆಲ್ಲರೂ ಮಹಾಪಾಶುಪತರೆಂದು ಹೆಸ ರಾಗುವರು. ಅವರು ಅನುಸರಿಸಿದ ಧರ್ಮಕ್ಕೆ ಮಹಾಪಾಶುಪತಮತವೆಂದು ಹೆಸ ರಾಗುವುದು. ಅದನ್ನೆ ರುದ್ರನ ತರುವಾಯ ಬಂದ ಭದ್ರನು 'ವೀರಶೈವ' ಎಂದು ಕರೆಯುವನು. ಮಹಾಪಾಶುಪತವು ಆದಿವೀರಶೈವವೆಂದು ಉತ್ಪತ್ತಿ ಗೊಳ್ಳುವುದು ಕಾಲಕಳೆದಂತೆ ಆದಿ ರೇಣುಕರು ಆದಿ ವೀರಶೈವಕ್ಕೆ ದಾರ್ಶನಿ



೧೦೦೮ ಜಗದ್ಗುರು ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರ
ಡಾ. ಶ್ರೀ. ಜ. ಚ. ನಿ.

ಕತೆಯನ್ನುಂಟು ಮಾಡಿ 'ಶಿವಾದ್ವೈತಸಿದ್ಧಾಂತ'ವೆಂಬ ಹೆಸರಿನಿಂದ ಸಂಸ್ಥಾಪನಗೊಳಿಸುವರು.

"ಪಾಶುಪತ ಔರ ಪಾಂಚರಾತ್ರ ಸಂಭವತಃ
ಆರ್ಯೋಂಕೇ ಅನೇಕೇ ಪಹಿಲೇಕೇ ಭಾರತೀಯಧರ್ಮೋ
ಔರ ಪರಂಪರಾ ಓಂಕೇ ಉಪಚೇಥೇ,
ಇಸಲಿಯೇ ಈಶ್ವರವಾದೀ ಹೋನೇಪರಭೀ...."

ಎಂದು ಶ್ರೀ ರಾಹುಲ ಸಾಂಕೃತ್ಯಾಯನ ಎಂಬವರು ತಮ್ಮ "ದರ್ಶನ–ದಿಗ್ದರ್ಶನ" ಎಂಬ ಗ್ರಂಥದಲ್ಲಿ (ಪುಟ ೬೯೦) ಉಲ್ಲೇಖಿಸಿರುವರು. ಇದರಿಂದಲೂ ಪಾಶುಪತಮತ ಪ್ರಾಚೀನತೆ ಭಾರತೀಯ ಧರ್ಮ ಆಕರತ್ವಗಳು ಅಭಿವ್ಯಕ್ತವಾಗುತ್ತವೆ.

ಮಹಾಪಾಶುಪತಮತದ ಅಂದರೆ ಅನಾದಿ ವೀರಶೈವದ ವಿಧಿವಿಧಾನಗಳನ್ನು ಇಪ್ಪತ್ತೆಂಟು ಶಿವಾಗಮಗಳಲ್ಲಿ ಒಂದಾದ ಕಾರಣಾಗಮವು ಖಚಿತವಾಗಿ ನಿರೂಪಿಸಿದೆ. ಅದನ್ನು ಅಧಿಕರಿಸಿ ಅಧ್ಯಯನಿಸಿ ಈ ಕಿರುಕೃತಿಯನ್ನು ಬರೆಯೋಣವಾಗಿದೆ. ಇದರಿಂದ ವೀರಶೈವದ ಮೂಲ ಮತ್ತು ಉಗಮಗಳ ಪರಿಚಯುವಾಗಲು ಅವಕಾಶವಾಗುತ್ತದೆ. ಈ ದಿಸೆಯಲ್ಲಿ ಈಗಾಗಲೇ ನಾವೇ ಚಂದ್ರಜ್ಞಾನಾಗಮದ ಮೇಲೆ ಬರೆದ "ಲಿಂಗವಂತ ಪಾಶುಪತಧರ್ಮ" ಎಂಬ ಗ್ರಂಥವು ನಮ್ಮ ರನ್ನ ಮಹೋತ್ಸವದ ಸಮಯದಲ್ಲಿ ಪ್ರಕಾಶಿತವಾಗಿದೆ. ಈ ದಿಸೆಯಲ್ಲಿ ಇದು ಎರಡನೆಯ ಪುಟ್ಟ ಪುಸ್ತಿಕೆ! ಇದರ ಮೌಲ್ಯವನ್ನರಿತು ಇದನ್ನು ಉದಾರ ಮನಸ್ಸಿನಿಂದ ಮುದ್ರಣ ವೆಚ್ಚವನ್ನೆಲ್ಲ ನಿರ್ವಹಿಸಿ ಪ್ರಕಾಶನಕ್ಕೆ ತಂದವರು ಬೆಂಗಳೂರಿನ ಪ್ರಸಿದ್ಧ ಯಜಮಾನ್ ಶ್ರೀ ಕೆಂಚಪ್ಪನವರು, ಮತ್ತು ಅವರ ಧರ್ಮಪತ್ನಿ ಶ್ರೀಮತಿ ಗೌರಮ್ಮನವರು. ಇವರಿಗೆ ಜಗದ್ಗುರು ಪಂಡಿತಾಚಾರ್ಯರು ಚಿರಾಯುರಾರೋಗ್ಯಭಾಗ್ಯಗಳನ್ನೀಯಲೆಂದು ಹೃದಯಾರೆ ಹಾರೈಸಿ ಹರಸೋಣವಾಗಿದೆ.

— ಕೃತಿಕರ್ತರು.

## ನಲ್ನುಡಿ

"ಲಿಂಗವಂತ ಪಾಶುಪತ ಧರ್ಮ" ಎಂಬ ಪುಸ್ತಕ ಆಗಲೇ ಪ್ರಕಟವಾಗಿದೆ ಈ ಹೊಲಬಿನಲ್ಲಿ "ಮಹಾಪಾಶುಪತ ವಿಧಾನ ಅರ್ಥಾತ್ ಅನಾದಿ ವೀರಶೈವ" ಎಂಬೀ ಗ್ರಂಥ ಎರಡನೆಯದು. ಇದು ಕಾರಣಾಗಮವನ್ನು ಆಧರಿಸಿ ಬರೆದ ಗ್ರಂಥ. ವೀರಶೈವಕ್ಕೆ ಮೂಲ ಪಶುಪತಿಮತ ಎಂದು ನಿರೂಪಿಸುವ ಪಥದಲ್ಲಿ ಇದು ಮತ್ತೊಂದು ದಿಟ್ಟ ಹೆಜ್ಜೆ. ಈ ಕೃತಿಯ ಮುದ್ರಣಕ್ಕೆ ಬೇಕಾದ ದ್ರವ್ಯ ಸೇವೆಯನ್ನು ಸಲ್ಲಿಸಿ ಕೃತಾರ್ಥರಾದ ಸಮಾಜಸೇವಾ ನಿರತರೂ ಗುರುಸೇವಾ ಧುರೀಣರೂ ಆದ ಶ್ರೀ ಯಜಮಾನ್ ಕೆಂಚಪ್ಪನವರು ಬೆಂಗಳೂರು ಇವರ ಪರಿಚಯವನ್ನಿಲ್ಲಿ ಮಾಡಿಕೊಡುತ್ತ ಮನ ತುಂಬಿ ಹರಸೋಣವಾಗಿದೆ.

ಶ್ರೀ ಯಜಮಾನ್ ಕೆಂಚಪ್ಪನವರ ಹುಟ್ಟೂರು ಕೋಲಾರ. ಇವರ ತಂದೆ ತಾಯಿ ಯಜಮಾನ್ ಶ್ರೀ ಭೋಗಪ್ಪ ಮತ್ತು ಶ್ರೀಮತಿ ಮರುಳ ಸಿದ್ಧಮ್ಮ! ಈ ದಂಪತಿಗಳಿಗೆ ಇವರು ಜ್ಯೇಷ್ಠ ಪುತ್ರರು. ಕುಶಲರು. ಹರ ದರು. ಎಳೆತನದಲ್ಲಿಯೇ ಕೋಲಾರವನ್ನು ಬಿಟ್ಟು ಬೆಂಗಳೂರಿಗೆ ಬಂದು ಸುಗಂಧ ದ್ರವ್ಯಗಳ ವ್ಯಾಪಾರವನ್ನು ಪ್ರಾರಂಭಿಸಿ ಪ್ರಗತಿಗೆ ಬರುವರು. ಭಾರತ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ ದೇಶಸೇವೆಯನ್ನು ತನು ಮನ ಧನ ಗಳಿಂದ ಸಲ್ಲಿಸಿರುವರು ಮೈಸೂರು ಸಂಸ್ಥಾನದಲ್ಲಿ ಪ್ರಜಾರಾಜ್ಯ ಸ್ಥಾಪಿಸುವ ಸಮಯದಲ್ಲಿಯೂ ಅಮೋಘ ಸೇವೆಯನ್ನು ಸಲ್ಲಿಸಿರುವರು.

ಮೈಸೂರು ವೀರಶೈವ ಎಜ್ಯುಕೇಷನ್ ಫಂಡ್ ಸಂಸ್ಥೆಯಲ್ಲಿ ಖಜಾಂಚಿ ಯಾಗಿ, ಹಣ ಸಂಗ್ರಹಿಸಿ, ಸಂಸ್ಥೆಯ ಪ್ರಗತಿಗೆ ಕಾರಣರಾದರು. ಕರ್ನಾ ಟಕ ರಾಜ್ಯದ ಮುಖಂಡರಾದ ಸಿದ್ಧವನಹಳ್ಳಿ ಶ್ರೀ ನಿಜಲಿಂಗಪ್ಪನವರ ನೇತೃತ್ವ ದಲ್ಲಿ ರೂಪಗೊಂಡ ಕರ್ನಾಟಕ ಏಕೀಕರಣ ಸಮಿತಿಯ ಕೋಶಾಧ್ಯಕ್ಷರಾಗಿಯೂ ಕೆಲಸ ನಿರ್ವಹಿಸಿದರು.

ದೇಶಪ್ರೇಮಿಗಳಾಗಿದ್ದಂತೆ ವಿದ್ಯಾಪ್ರೇಮಿಗಳೂ ಆಗಿರುವರು. ಅಂತೆಯೇ ರಾಷ್ಟ್ರೀಯ ವಿದ್ಯಾಲಯ ಸಂಸ್ಥೆಯ ಸಂಸ್ಥಾಪಕ ಸದಸ್ಯರಾಗಿ ಮತ್ತು

ಶ್ರೀ ಜಗದ್ಗುರು ರೇಣುಕಾಚಾರ್ಯ ವಿದ್ಯಾಸಂಸ್ಥೆಯ ಸ್ಥಾಪಕಸದಸ್ಯರೂ ಉಪಾಧ್ಯಕ್ಷರೂ ಅಧ್ಯಕ್ಷರೂ ಆಗಿ ಶಿಕ್ಷಣ ಕ್ಷೇತ್ರದಲ್ಲಿ ಆದರ್ಶ ಸೇವೆಯನ್ನು ಸಲ್ಲಿಸಿರುವರು. ಅಲ್ಲದೆ ಬೆಂಗಳೂರು ನಗರದ ರಾಷ್ಟ್ರೀಯ ವಿದ್ಯಾಸಂಸ್ಥೆ, ಮತ್ತು ಶ್ರೀ ಚಾಮರಾಜೇಂದ್ರ ಸಂಸ್ಕೃತ ಕಾಲೇಜ ಮೊದಲಾದ ಹಲವು ಸಂಸ್ಥೆಗಳಿಗೆ ತಮ್ಮ ತಂದೆ ತಾಯಿಗಳ ಹೆಸರಿನಲ್ಲಿ ಉದಾರವಾಗಿ ಧನವನ್ನು ದಾನ ಮಾಡಿರುವರು. ಚಿಕ್ಕಪೇಟೆ ವರ್ತಕ ಸಂಘದ ಅಧ್ಯಕ್ಷರಾಗಿ, ಮತ್ತು ಮೈಸೂರು ಊದಬತ್ತಿ ಮಾಡುವವರ ಸಂಘದ ಸಂಸ್ಥಾಪಕ ಸದಸ್ಯರಾಗಿ ಕೆಲಸ ಮಾಡಿರುವರು.

ನೇತ್ರದಾನಿ ಡಾ|| ಎಂ. ಸಿ. ಮೋದಿಯವರ ಸೇವಾಕಾರ್ಯದಲ್ಲಿ ನೆರವಾಗಿ ಬೆಂಗಳೂರು ನಗರದಲ್ಲಿ ನಡೆದ ಎಲ್ಲ ನೇತ್ರದಾನ ಶಿಬಿರಗಳಲ್ಲಿ ನಿಂತುಮಾಡಿರುವ ಸೇವೆ ಸ್ತುತ್ಯರ್ಹವಾದುದು. ಇವರು ಮಾಡಿದ ಹಲವು ಬಗೆಯ ಸೇವೆಯನ್ನು ನೆನೆದು ರಾಜ್ಯದ ಲಯನ್ಸ್ ಕ್ಲಬ್ಬಿನವರು ಸನ್ಮಾನಿಸಿರುವುದು ಪ್ರಶಂಸನೀಯವಾಗಿದೆ. "ವಿಶ್ವಕರ್ನಾಟಕ" ದಿನ ಪತ್ರಿಕೆಯನ್ನು ನಡೆಸಲು ನೆರವು ಸಂದಿದೆ. ವೀರಶೈವ ಧರ್ಮಗ್ರಂಥಗಳ ಪ್ರಕಾಶನಕ್ಕೆ ಪ್ರೋತ್ಸಾಹವನ್ನಿತ್ತಿರುವರು. ಬಸವನಗುಡಿಯ ಬಸವೇಶ್ವರ ದೇವಾಲಯ ಗೋಪುರವನ್ನು ತಮ್ಮ ವ್ಯಾಪಾರಿ ಮಿತ್ರರ ಸಹಾಯದಿಂದ ನೂತನವಾಗಿ ನಿರ್ಮಾಣಮಾಡಿಸಿರುವರು. ಶ್ರೀ ತೋಟದಪ್ಪನವರ ಸಂಸ್ಥೆಯ ಧರ್ಮದರ್ಶಿಗಳಾಗಿ, ಬೆಂಗಳೂರಿನ ಶ್ರೀ ಮಹಂತರಮಠದ ಟ್ರಸ್ಟ ಸಮಿತಿ ಅಧ್ಯಕ್ಷರಾಗಿ, ಪಂಚಾಚಾರ್ಯ ಉಚಿತ ವಿದ್ಯಾರ್ಥಿನಿಲಯದ ಅಧ್ಯಕ್ಷರಾಗಿ ಇಂದಿಗೂ ಸೇವೆ ಸಲ್ಲಿಸುತ್ತಿರುವರು.

ಇವರ ಧರ್ಮಪತ್ನಿ ಶ್ರೀಮತಿ ಗೌರಮ್ಮನವರು ಲಿಂಗೈಕ್ಯರಾಗಿರುವರು. ಇವರೂ ಉದಾರಹೃದಯರು, ಭಕ್ತಿಪರರು. ಗುರು ಲಿಂಗ ಜಂಗಮ ಪ್ರೇಮಿಗಳು ದಾಸೋಹಿಗಳು. ಪಂಚಪೀಠಗಳಲ್ಲಿ ನಿಷ್ಠೆಯುಳ್ಳವರಾಗಿದ್ದರು. ಶ್ರೀ ಯಜಮಾನ್ ಶ್ರೀಕಂಠಯ್ಯ ಎಂಬವರು ಇವರ ಪುತ್ರರು. ಇವರೂ ಇವರ ತಂದೆಯಂತೆ ಮಹಂತರಮಠದ ಸೇವೆಯನ್ನು ಸಲ್ಲಿಸುತ್ತಿರುವರು.

ಶ್ರೀ ಯಜಮಾನ್ ಕೆಂಚಪ್ಪನವರಿಗೆ ಈಗ ೮೫ ವರುಷ ವಯಸ್ಸು. ಈಗಲೂ ಸಾಮಾಜಿಕ ಸೇವೆಯಲ್ಲಿ ಉತ್ಸಾಹವುಳ್ಳವರಾಗಿರುವರು. ಪಂಚಪೀಠಗಳಲ್ಲಿ ನಿಷ್ಠೆಯುಳ್ಳವರಾಗಿರುವರು.

ಶ್ರೀ ಯು. ಕೆಂಚಪ್ಪನವರು ಕೋಲಾರದವರಾಗಿದ್ದುದರಿಂದ ನಮ್ಮ ಪೀಠದ ಪರಿಚಯವೂ ಸಾಕಷ್ಟಿದೆ; ಶ್ರದ್ಧೆಯೂ ಇದೆ. ಅಂತೆಯೇ ನಮ್ಮೀ ಗ್ರಂಥ ಮುದ್ರಣಕ್ಕೆ ಆಗುವ ದ್ರವ್ಯ ಸೇವೆಯನ್ನು ತಾವೇ ಮುಕ್ತಮನಸ್ಸಿನಿಂದ ಮಾಡಿ ಕೃತಾರ್ಥರಾಗಿದ್ದಾರೆ. ಇದರಿಂದ ಇವರ ಕೀರ್ತಿ ಶಾಶ್ವತ ಸಾಹಿತ್ಯ ಕ್ಷೇತ್ರದಲ್ಲಿ ! ಇವರಿಗೆ ಶ್ರೀಶೈಲ ನಿಡುಮಾಮಿಡಿ ಜಗದ್ಗುರು ಪಂಡಿತಾಚಾರ್ಯರು ಚಿರಾಯುರಾರೋಗ್ಯಭಾಗ್ಯಗಳನ್ನು ಕರುಣಿಸಲೆಂದು ಹೃದಯಾರೆ ಹಾರೈಸೋಣವಾಗಿದೆ.

— **ಕೃತಿಕರ್ತರು,**

ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರರು

ಡಾ. ಶ್ರೀ. ಜ. ಚ. ನಿ

ಬೆಂಗಳೂರು

೬–೩–೮೪



ಶ್ರೀ ಯಜಮಾನ್ ಕೆಂಚಪ್ಪನವರು
ಬೆಂಗಳೂರು



ಲಿಂ. ಶ್ರೀಮತಿ ಗೌರಮ್ಮನವರು
ಯಜಮಾನ್ ಕೆಂಚಪ್ಪನವರು

# ಪಶುಪತಮತ ಉಗಮ

"ಭುಜದ್ವಯ ಲಿಂಗಧಾರಕಾಃ, ಫಾಲೇ ತ್ರಿಶೂಲಧಾರಿಣೋರುದ್ರಾಃ
ಭುಜದ್ವಯೇ ಡಮರುಧಾರಿಣ ಉಗ್ರಾಃ, ಫಾಲೇ ಲಿಂಗಧಾರಿಣಃ
ಶ್ರೇಷ್ಠಾಃ ।
ಹೃದಿ ತ್ರಿಶೂಲಂ ಶಿರಸಿ ಪಾಷಾಣಲಿಂಗಂ ಚ ಧಾರಿಣೋ
ಜಂಗಮಾಃ,
ಲಲಾಟೇ ಭುಜದ್ವಯೇ ಹೃನ್ನಾಭಿಷಂಗಮಾಲಿಂಗಧಾರಿಣಃ
ಪಾಶುಪತಾಃ ॥"

— ಆನಂದಗಿರಿ ಶಂಕರವಿಜಯೇ, ಅ. ೧.

ಪಾಶುಪತವರ್ಣನವಿದು. ಹಲವರು ತೋಳುಗಳೆರಡರಲ್ಲಿ ಲಿಂಗಧಾರಿಗಳು, ಹಲವರು ಹಣೆಯಲ್ಲಿ ತ್ರಿಶೂಲಧಾರಿಗಳು, ಹಲವರು ಭುಜದ್ವಯದಲ್ಲಿ ಡಮರು ಧಾರಿಗಳು, ಹಲವರು ಹಣೆಯಲ್ಲಿ ಲಿಂಗಧಾರಿಗಳು; ಇನ್ನು ಹಲವರು ಹೃದಯದಲ್ಲಿ ತ್ರಿಶೂಲ–ಶಿರದಲ್ಲಿ ಶಿಲಾಲಿಂಗ (ಇಷ್ಟಲಿಂಗ) ಧಾರಿಗಳು, ಇವರು ಜಂಗಮರು; ಮತ್ತೆ ಕೆಲವರು ಲಲಾಟ–ಭುಜದ್ವಯ–ಹೃದಯ ನಾಭಿಗಳಲ್ಲಿ ತಮತಮಗೆ ಬೇಕಾದಲ್ಲಿ ಲಿಂಗಧಾರಿಗಳಾಗಿದ್ದರು, ಇವರೇ ಪಾಶುಪತರು. ಇವರು ಹಣೆಯಲ್ಲಿ ತೋಳುಗಳಲ್ಲಿ ಎದೆಯಲ್ಲಿ ಹೊಕ್ಕಳ ಮೇಲೆ ಲಿಂಗಧರಿಸುತ್ತಿದ್ದರೆಂಬುದು ಇದರಿಂದ ಸುಸ್ಪಷ್ಟವಾಗುತ್ತದೆ. ಇಷ್ಟ ಲಿಂಗಧಾರಣ ಅಂದಿನಿಂದಲೇ ಬಳಕೆಯಲ್ಲಿ ಬಂದಿದೆ. ಇತ್ತೀಚಿಗೆ ಬಂದಿದೆ ಯೆಂದು ಹೇಳುವವರು ಇದನ್ನು ತಿಳಿದುಕೊಳ್ಳಬೇಕು.

ಪಶುಪತಿಮತಾನುಯಾಯಿಗಳು ಪಾಶುಪತರು. ಪಶುಪತಿಮತ ಶೈವ ಮತಕ್ಕಿಂತ ಪುರಾತನದ್ದು. ಶಿವನಿಂದ ಬಂದುದು ಶೈವಮತ, ಪಶುಪತಿ ರುದ್ರನಿಂದ ಬಂದುದು ಪಾಶುಪತಮತ. ರುದ್ರನು ಪಶುಪತಿಯಲ್ಲದೆ ಪಾರ್ವತೀ ಪತಿ ಶಿವನು ಪಶುಪತಿಯಲ್ಲ; ಈತ ವೃಷಭಪತಿ. ಪಶುಪತಿರುದ್ರ ಅನಾದಿ ಕಾಲಕ್ಕೆ ಸೇರಿದಾತನು. ಶಿವನು ಆದಿ ಕಾಲದವನು. ರುದ್ರನು ಅಪ್ರತಿಮ ವೈದ್ಯನಾದುದರಿಂದ ನಾರುಬೇರುಗಳಿಗಾಗಿ ಕಾಡುಮೇಡುಗಳಲ್ಲಿ ಸುತ್ತುತ್ತಿದ್ದನು. ಅಲ್ಲಿರುವ ಪಶು (ಹಸು)ಗಳನ್ನು ಹಿಡಿತಂದು ಸಾಕಿ ಹಾಲು ಮೊಸರು ಮಜ್ಜಿಗೆ ಬೆಣ್ಣೆ ತುಪ್ಪಗಳಲ್ಲಿ ಔಷಧಿಯನ್ನು ಕಂಡುಕೊಂಡನು; ಬರಬರುತ್ತ ಆಹಾರಗಳನ್ನಾಗಿಸಿದನು. ಇದಕ್ಕಾಗಿ ಹೆಚ್ಚು ಹಸುಗಳನ್ನು ಸಾಕುತ್ತಿದ್ದನು. ಇದರಿಂದಾಗಿ ಆತನಿಗೆ(ರುದ್ರನಿಗೆ)ಅನ್ವರ್ಥಕವಾಗಿ ಪಶುಪತಿ ಎಂಬ ಹೆಸರು ಬರುವುದು.ಇದನ್ನು ಕಾಲಕಳೆದಂತೆ ಆಧ್ಯಾತ್ಮಿಕ ಅರ್ಥಕ್ಕೆ ತಿರುಗಿಸಲಾಗುವುದು. ಪಶು ಸಹಜ ಜೀವನ ಮಾಡುವ ಮಾನವರೆಲ್ಲರೂ ಪಶುಗಳು; ಇವರಿಗೆ ಮಾನವೀಯ ಧರ್ಮವನ್ನು ಬೋಧಿಸಿದ ರುದ್ರನೇ ಪತಿ ಎಂದು ಅರ್ಥವಿಸತೊಡಗಿದರು. "ಸರ್ವಸ್ಮಾದಧಿಕೋ ರುದ್ರಃ ಪಶುಪಾಶವಿಮೋಚಕಃ" ಎಂದು ಸ್ಕಂದ ಪುರಾಣೋಕ್ತಿಯಿದೆ. ಪಶುಪಾಶಗಳನ್ನು ತೊಲಗಿಸಿ ಪತಿಯೆನಿಸುವನು. ಭೋಕ್ತೃಗಳೆಲ್ಲ ಪಶುಗಳು, ಭೋಜ್ಯವಿಷಯಗಳೆಲ್ಲ ಪಾಶಗಳು, ಜೀವರಿಗೆ ಪ್ರೇರಕನಾದ ದೇವನೇ (ರುದ್ರನೇ) ಪತಿ ಎಂದೂ ಅರ್ಥಿವಿಸುವರು. ಇದರಿಂದಾಗಿ ಪಶುಪತಿಮತ ಏರ್ಪಡುವುದು. ಏರ್ಪಟ್ಟ ತ್ರಿಮಲಗಳೆ ಪಾಶಗಳು, ಇವಕ್ಕೆ ಒಳಗಾದವರೆ ಪಶುಗಳು; ಇವನ್ನು ತೊಲಗಿಸುವ ಸಂಸ್ಕಾರವನ್ನಿತ್ತು ತ್ರಿವಿಧ ದೇಹಗಳನ್ನು ತ್ರಿವಿಧಾಂಗಗಳನ್ನಾಗಿಸಿ, ತ್ರಿವಿಧ ಲಿಂಗಕಳೆಗಳನ್ನು ಕರುಣಿಸುವ ರುದ್ರನೆ ಪತಿ ಎಂದು ಹೇಳಿ ಆತ್ಮಶೋಧನೆಗೆ ಅಂದೇ ಆರಂಭವಾಗುವುದು. ಪಶುಪತಿ ಮತ ಅಥವಾ ಧರ್ಮವೆಂದು ಹೆಸರಾಗುವುದು. "ಪಾಶುಪತ (ಪಶುಪತಿ – ಹರಪ್ಪಾ ಮಹೇಂಜೋದಾರೋ ಪಶುಪತಿ ವಿಗ್ರಹ ಗಮನಿಸಿ) ಮತ ರುದ್ರನಿಂದ ಉಪದೇಶಿಸಲ್ಪಟ್ಟಿತ್ತೆಂದು, ಮಹಾಭಾರತದ ಶಾಂತಿ ಪರ್ವದಲ್ಲಿ ಹೇಳಿದೆ, (೧೮೫, ೧೨೪). —"ನೊಳಂಬ ಇತಿಹಾಸದರ್ಶನ" ಎಂಬ ಗ್ರಂಥದ ೧೩೧ನೆಯ ಪುಟದಲ್ಲಿ ಶ್ರೀ ಕೆ. ಆರ್. ಬಸವರಾಜು ಅವರು ಬರೆದಿದ್ದಾರೆ. ಇದನ್ನು ಅನು

ಸರಿಸುವವರು ಪಾಶುಪತರೆಂದು ಇನ್ನೂ ಕೊಂಚ ಮುಂದುವರಿದವರು ಮಹಾ ಪಾಶುಪತರೆಂದು ಹೇಳಲಾಗುವುದು. ಇವರೆ ರುದ್ರಗಣರು. ರುದ್ರಗಣರಲ್ಲಿ ಹಲವರು ಪಾಶುಪತರೆನಿಸಿದರು; ಹಲವರು ಹೆಚ್ಚು ಮುಂದುವರಿದು ಮಹಾ ಪಾಶುಪತರೆನಿಸಿದರು. ಇವರ ಆ ಪಶುಪತಿಮತವನ್ನೆ ಅನಾದಿ ವೀರಶೈವವೆಂದು ಹೇಳಲಾಗುತ್ತದೆ. ಇದನ್ನು ಮುಂದೆ ವೀರಮಾಹೇಶ್ವರರು ಅನುಸರಿಸಿ ಇನ್ನೂ ಮುಂದುವರಿಸುವರು. ಇವರ ಬಳಿಕ ಶ್ರೀ ರೇಣುಕಾದಿ ಶಿವಾಚಾರ್ಯರು ಸೈದ್ಧಾಂತಿಕವಾಗಿ ಮುಂದುವರಿಸಿ ಶಿವಾದ್ವೈತತತ್ವವನ್ನು ರೂಪಿಸುವರು. ಶ್ರೀ ಜಗದ್ಗುರು ರೇಣುಕರು ಬೋಧಿಸಿದ ಸಿದ್ಧಾಂತ ಶಿಖಾಮಣಿಯು ಪಶುಪತಿಮತ ಸಾರವೆಂದು ಹೇಳಲಾಗಿದೆ. ಅದು ಹೀಗಿದೆ :

"ಅನುಗತ ಸಕಲಾರ್ಥೇ ಶೈವತಂತ್ರೈಃ ಸಮಸ್ತೈಃ
ಪ್ರಕಟಿತ ಶಿವಬೋಧಾದ್ವೈತಭಾವಪ್ರಸಾದೇ ।
ವಿದಧುತು ಮತಿಮಸ್ಮಿನ್ ವೀರಶೈವಾ ವಿಶಿಷ್ಟಾಃ
ಪಶುಪತಿಮತಸಾರೇ ಪಂಡಿತಶ್ಲಾಘನಿಯೇ ॥"

— ಸಿ. ಶಿಖಾಮಣಿ

ಪಶುಪತಿಮತಸಾರವೇ ಷಟ್‌ಸ್ಥಲ ಸಿದ್ಧಾಂತ, ಇದು ಪಂಡಿತಶ್ಲಾಘ್ಯ. ಇದನ್ನು ವಿಶಿಷ್ಟ ವೀರಶೈವರು ಪರಿಪಾಲಿಸಬೇಕು. ಶಿವಾದ್ವೈತಭಾವಪ್ರಸಾದ ವುಳ್ಳುದಾಗಿದೆ. ಪಶುಪತಿಮತದ ಪ್ರಾಧಾನ್ಯತೆ ಮತ್ತು ಪ್ರಾಚೀನತೆ ಹಾಗೂ ವೀರಶೈವಕ್ಕೆ ಮೂಲ ಶ್ರೋತತೆಗಳು ಅಭಿವ್ಯಕ್ತವಾಗಿವೆ.

"ಸ್ವಾಮಿ ನೀನು, ಶಾಶ್ವತ ನೀನು, ಎತ್ತಿದೆ ಬಿರುದ ಜಗವೆಲ್ಲರಿಯಲು,
ಮಹಾದೇವ ಮಹಾದೇವ ಮಹಾದೇವ ಇಲ್ಲಿಂದ ಮೇಲೆ ಶಬ್ದವಿಲ್ಲ.
ಪಶುಪತಿ ಜಗಕ್ಕೇಕೋ ದೇವ; ಸ್ವರ್ಗ ಮರ್ತ್ಯ ಪಾತಾಳದೊಳಗೆ
ಒಬ್ಬನೇ ದೇವ." ಎಂದು ಬಸವಣ್ಣ ಬಣ್ಣಿಸಿದ್ದಾನೆ ರುದ್ರದೇವನನ್ನು.

"ರುದ್ರತತ್ತ್ವ ಲಿಂಗಮೂರ್ತಿಯಾಗಿ, ಈಶ್ವರತತ್ತ್ವ ಶರಣ ಮೂರ್ತಿಯಾಗಿ, ಸದಾಶಿವ ತತ್ತ್ವ ಐಕ್ಯಕೂಟಸ್ಥನಾಗಿ...."ಎಂದು ಮೋಳಿಗೆಮಾರಯ್ಯ ಹೇಳಿದ್ದಾನೆ.

"ರುದ್ರೋಲಿಂಗಮುಮಾಪೀಠಂ ತಸ್ಮೈ ತಸ್ಮೈನಮೋನಮಃ ।
ಸರ್ವದೇವಾತ್ಮಕಂ ರುದ್ರಂ ನಮಸ್ಕುರ್ಯಾತ್ ನಿರಂತರಂ ॥" ಎಂದಿದೆ ರುದ್ರ ಹೃದಯೋಪನಿಷತ್ತು.

"ಕಥಿತಾಃ ಶ್ರೀರುದ್ರೇಣೈವ ಲಿಂಗಸ್ಯಾರ್ಚನ ಸೂಚತಾಃ
ಸಂತಿ ರುದ್ರೇಣ ಕಥಿತಾಃ ಶಿವಧರ್ಮಾಃ ಸನಾತನಾಃ
ವೀರಭದ್ರೋ ಯಥಾ ರುದ್ರಸ್ತ್ವನ್ಯೇ ಚ ಗುರವಃ ಸ್ಮೃತಾಃ
ಗುರೋರ್ರಾಜ್ಞಾತಾಶ್ಚ ಗುರವೋ ವಿಖ್ಯಾತಾಃ ಭುವನತ್ರಯೇ ॥"

— ಸ್ಕಾಂದ, ಕೇದಾರ ಖಂಡ.

ಹೀಗೆ ರುದ್ರದೇವನಿಂದ ನಿರ್ಮಿತವಾದ ಪಾಶುಪತ ಮಹಾಪಾಶುಪತ ಅರ್ಥಾತ್ ಅನಾದಿ ವೀರಶೈವ ಧರ್ಮಗಳು ಧರ್ಮವಿಧಾನಗಳು ಹಲವಿವೆ. ರುದ್ರ–ಭದ್ರ, ರೇಣುಕ–ದಾರುಕ, ಘಂಟಾಕರ್ಣ–ಗಜಕರ್ಣಾದಿ ಗುರುಗಳಿದ್ದಾರೆ. ಇವುಗಳ ಬಗೆಗೆ ಗಿರಿಜೆಯು ಗಿರೀಶನನ್ನು ಕುರಿತು ಕಾರಣಾಗಮದಲ್ಲಿ ಮುಂದಿನಂತೆ ಕೇಳುತ್ತಾಳೆ.

ಕಾರಣಾಗಮದಲ್ಲಿನ

# ಮಹಾಪಾಶುಪತ ವಿಧಾನ

— ೧ —

"ಭವತಾ ಹಿ ಪುರಾ ಪ್ರೋಕ್ತಂ ಕರುಣಾಯಂತ್ರಿತಾತ್ಮನಾ
ವೀರಶೈವೀಯಧರ್ಮಾಸ್ತು ಸರ್ವಧರ್ಮೋತ್ತಮಾ ಇತಿ
ತಾನದ್ಯ ಶ್ರೋತುಕಾಮಾಽಸ್ಮಿ ಪ್ರಸನ್ನೋ ಬ್ರೂಹ್ಯಶೇಷತಃ !"

— ಕಾರಣಾಗಮ

ಆದಿಕಾಲದ ಶಿವೆಯು ಶಿವನನ್ನು ಕೇಳಿದ್ದಾಳೆ : ಕಾರುಣ್ಯಾತ್ಮರಾದ ನೀನು ಹಿಂದೆ ಹೇಳಿದಿರಿ. ಅಂದರೆ ಅನಾದಿ ಕಾಲದ ಸುದ್ದಿಯನ್ನು ಹೇಳಿದಿರಿ; ಅದೆಂದರೆ ಅನಾದಿ ವೀರಶೈವ ಧರ್ಮಗಳು ಸರ್ವಧರ್ಮೋತ್ತಮಗಳೆಂದು ! ಅದನೀಗ ಕೇಳ ಬಯಸಿದ್ದೇನೆ. ಪ್ರಸನ್ನನಾಗಿ ಏನೆಲ್ಲವನ್ನು ಹೇಳು !

ಇಲ್ಲಿ 'ಪುರಾಪ್ರೋಕ್ತಂ' ಎಂಬುದು ಪರಿಭಾವನಾರ್ಹವಾದುದು. ಈ ಮಾತನ್ನು ಆಡುವವಳು ಗಿರಿಜೆ. ಅವಳು ಆದಿಕಾಲದವಳು. ಅನಾದಿ ಕಾಲ ದಲ್ಲಿ ಹೇಳಿದುದನ್ನು ಕೇಳತೊಡಗಿದ್ದಾಳೆ. ಎರಡನೆಯದಾಗಿ "ವೀರಶೈವಧರ್ಮಾಃ ಸರ್ವಧರ್ಮೋತ್ತಮಾಃ" ಎಂಬ ಮಾತು ಮತ್ತೂ ಮನನಾರ್ಹವಾದುದು. ಆ ಕಾಲದ ವೀರಶೈವ ವೈಶಿಷ್ಟ್ಯದ ಸಂಕೇತ !

ಕಾರಣಾಗಮವು ಮಹಾಪಾಶುಪತವಿಧಿಯನ್ನು ಹೇಳಹೊರಟು ವೀರ ಶೈವದ ಮಾತನ್ನು ಹೇಳಿದೆ. ಮಹಾಪಾಶುಪತವೇ ವೀರಶೈವವೆಂಬುದು ಇದ ರಿಂದ ಸಿದ್ಧವಾಗುತ್ತದೆ. ಅಂತೆಯೆ ಅನಾದಿತ್ವವೂ ಸಿದ್ಧವಾಗುತ್ತದೆ.

ಪೂರ್ವದ ವೀರಶೈವ ಸರ್ವೋತ್ತಮ ಧರ್ಮಗಳನ್ನು ಶಿವೆಯು ಶಿವನನ್ನು ಕೇಳಿದ್ದಾಳೆ. ಇದರಿಂದ ಶೈವಮತ ಸ್ಥಾಪಕನಾದ ಶಿವನಿಗಿಂತಲೂ ವೀರಶೈವವು ಪುರಾತನದ್ದೆಂದು ಬೇರೆ ಹೇಳಬೇಕಾಗಿಲ್ಲ. ಶೈವಮತಕ್ಕಿಂತಲೂ ವೀರಶೈವ ತೀರ ಹಿಂದಿನದು.

ಶೈವ, ಪಾಶುಪತ, ಸೋಮ, ಲಾಕುಳ ಎಂದು ಹೇಳುವುದುಂಟು. ಇದು ಸರಿಯಲ್ಲ. ಪಾಶುಪತ, ಶೈವ,ಸೋಮ, ಲಾಕುಳ ಎಂದೇ ಹೇಳಬೇಕು. ಛಂದೋ ಬದ್ಧತೆಗಾಗಿ ಹಾಗೆ ಹೇಳುತ್ತಿರಬೇಕು.

"ಆಗಮಾ ಬಹುಧಾ ಪ್ರೋಕ್ತಾಃ ಶಿವೇನ ಪರಮಾತ್ಮನಾ
ಶೈವಂ ಪಾಶುಪತಂ ಸೋಮಂ ಲಾಕುಲಂ ಚೇತಿ ಭೇದತಃ ।"

— ಸಿ. ಶಿಖಾಮಣಿ

ಇಲ್ಲಿ ಶೈವ ಮೊದಲು ಉಲ್ಲಿಖಿತವಾಗಿದೆ. ಆದರೆ ವಾಸ್ತವವಾಗಿ ಪಾಶುಪತವೇ ಪೂರ್ವದ್ದು; ಪ್ರಧಾನವಾದದ್ದು.

"ಸರ್ವೇಷಾಮಪಿ ಶೈವಾನಾಂ ವೀರಶೈವಂ ಮಹತ್ತರಂ
ಅಲ್ಪಕ್ರಿಯಾ ಬಹು ಫಲಂ ವೀರಶೈವಂ ಚ ಲಕ್ಷಣಂ ।"

ಪಾಶುಪತವೆ ಮಹಾಪಾಶುಪತ (ವೀರಶೈವ)ವಾಗಿ ವಿಶಿಷ್ಟತೆಯನ್ನು ಮಹತ್ತತೆಯನ್ನು ಪಡೆದಿದೆ. ಇದರ ವಿಧಿ ವಿಧಾನಗಳನ್ನು ಮುಂದಿನಂತೆ ಶಿವನು ಶಿವೆಗೆ ಕಾರಣಾಗಮದಲ್ಲಿ ಖಚಿತವಾಗಿ ಹೇಳಿದ್ದಾನೆ:

"ಅತ್ಯಾಶ್ರಮಂ ಪಾಶುಪತಂ ಶಾಂಭವಂ ತಚ್ಛಿರೋವ್ರತಂ
ಇತ್ಯೇವಂ ನಾಮಭಿಃ ಪುಣ್ಯೈರ್ನಿಗಮಾಂತೇಷು ಗೀಯತೇ ।"

ಓ ಗಿರಿಜೆ, ಅನಾದಿ ವೀರಶೈವವನ್ನು ಅತ್ಯಾಶ್ರಮವೆಂದು, ಪಾಶುಪತವೆಂದು, ಶಾಂಭವವೆಂದು, ಶಿರೋವ್ರತವೆಂದು ಕರೆಯುತ್ತಾರೆ. ಇವೆಲ್ಲವೂ ವೀರಶೈವದ ಪರ್ಯಾಯವಾದ ಪುಣ್ಯನಾಮಗಳು. ಇವು ನಿಗಮಾಂತಗಳಲ್ಲಿ ಗೇಯವಾಗಿವೆ.

ರುದ್ರೋತ್ಪಾದಿತವಾದ ಪಶುಪತಿಮತವು ಅತ್ಯಾಶ್ರಮವೆನಿಸಿದೆ; ಶಿರೋವ್ರತವೆನಿಸಿದೆ. ಅದರಲ್ಲಿ ಆಶ್ರಮಭೇದಗಳಿಲ್ಲ.

"ಬ್ರಹ್ಮಚಾರೀ ಗೃಹಸ್ಥೋ ವಾ ವಾನಪ್ರಸ್ಥೋ ಯತಿಸ್ತು ವಾ
ಯೋಷಿದ್ವಾ ಪರಿಗೃಹ್ಣೀಯಾತ್ ಸದ್ಯೋಮುಕ್ತಿಂ ಯದಿಚ್ಛತಿ ।
ವಿದ್ಯತೇ ನಾಸ್ಯ ಸದೃಶಂ ವೇದೇಷ್ವನ್ಯೇಷು ವಾ ಕ್ವಚಿತ್
ಕಾಂಕ್ಷೇತ ಮುಕ್ತಿಂ ಯಸ್ಸದ್ಯಃ ಸ ಏತದ್ವ್ರತಮಾಚರೇತ್" ॥

ಆತ್ಯಾಶ್ರಮವೆನಿಸಿದ ಮಹಾಪಾಶುಪತದಲ್ಲಿ ಚತುರಾಶ್ರಮ ಭೇದವಿಲ್ಲ; ಹೆಣ್ಣು ಗಂಡು ಎಂಬ ಜಾತಿವಾದವಿಲ್ಲ. ಪುನರ್ಭವ ರಹಿತವಾದ ಸದ್ಯೋ ಮುಕ್ತಿಯನ್ನು ಬಯಸುವವರು ಯಾರೇ ಇರಲಿ ಅವರಿಗೆಲ್ಲರಿಗೂ ಇದರಲ್ಲಿ ಪ್ರವೇಶವುಂಟು. ಲೋಕಾನುಗ್ರಹವೇ ಇದರ ಮೂಲ ಧ್ಯೇಯ. ಮಾನವೀಯ ಮೌಲ್ಯವೇ ಇದರ ಮೂಲಗುರಿ. "ಪುನರ್ಭವ ಪ್ರಹಾಣಾಯ ಮುಮುಕ್ಷುಸ್ತತ್ ಸಮಾಚರೇತ್।" ಪುನರ್ಜನ್ಮದಪರಿಭವಕ್ಕೆ ಅಂದರೆ ಕೋಟಲೆಗೆ ಬೀಳಬಾರದೆನ್ನು ವವರೆಲ್ಲರೂ ಇದನ್ನು ಈ ಮಹಾಪಾಶುಪತವ್ರತವನ್ನು ಚನ್ನಾಗಿ ಆಚರಿಸಬೇಕು.

"ತಿತೀರ್ಷುರ್ಜನ್ಮವಾರಾಶಿಂ ಗುರುಪೋತಂ ಸಮಾಶ್ರಯೇತ್
ಸಮ್ಯಕ್ ಪರೀಕ್ಷ್ಯವೈಶಿಷ್ಯಂ ಗೃಹ್ಣೀಯಾದ್ದೇಶಿಕೋತ್ತಮಃ ।
ನಿವೇದಯಿಷ್ಯನ್ಮದ್ ಜ್ಞಾನಂ ದದ್ಯಾದಾದೌ ಶಿರೋವ್ರತಂ
ಅನ್ಯಥಾ ಗುರುಶಿಷ್ಯೌ ತೌ ಪತತೋ ನರಕಾಂಬುಧೌ ॥"

— ಕಾರಣಾಗಮ

ವಿಶಾಲಮನೋಭಾವದ ಮಹಾಪಾಶುಪತವ್ರತವನ್ನರಿಯಬೇಕಾದರೆ, ಅರಿತು ಹುಟ್ಟುಗಡಲನ್ನು ದಾಟಬೇಕಾದರೆ ಗುರುವೆಂಬ ನಾವೆಯನ್ನು ಆಶ್ರಯಿಸ ಬೇಕು. ಶಿಷ್ಯನನ್ನು ಶ್ರೀಗುರು ಚನ್ನಾಗಿ ಪರೀಕ್ಷಿಸಿ ಪರಶಿವಜ್ಞಾನ ಕ್ರಿಯೆಗಳನ್ನು ಬೋಧಿಸಿ 'ಶಿರೋವ್ರತ'ಕ್ಕೆ ಹಚ್ಚಬೇಕು. ಶಿರೋವ್ರತವೆಂದರೆ ಇಷ್ಟಲಿಂಗವನ್ನು ಶಿರಸ್ಸಿನಲ್ಲಿ ಧರಿಸುವಿಕೆ! ಧರಿಸದೆ ಹೋದರೆ ಗುರುಶಿಷ್ಯರಿಬ್ಬರೂ ನರಕಾಂಬುಧಿ ಯಲ್ಲಿ ಬೀಳುತ್ತಾರೆ.

ಅಂದು ಅಂದರೆ ಅನಾದಿಕಾಲದಲ್ಲಿ ಇಷ್ಟಲಿಂಗವನ್ನು ಹೆಚ್ಚಾಗಿ ತಲೆಯಲ್ಲಿ ತಳೆಯುತ್ತಿದ್ದರು. ತೋಳು–ಎದೆ–ಹೊಕ್ಕುಳಗಳಲ್ಲಿಯೂ ಧರಿಸುವವರಿದ್ದರು. ಇದಕ್ಕೆ ಆನಂದಗಿರಿ ಶಂಕರ ವಿಜಯೋಕ್ತಿಯೆ ಪ್ರಮಾಣವಾಗಿದೆ. ಪ್ರಥಮ ದಲ್ಲಿ ಅದನ್ನು ಉದಹರಿಸಲಾಗಿದೆ. ಅನಾದಿ ವೀರಶೈವವೆಂದೆನಿಸಿದ ಮಹಾಪಾಶು ಪತ ಧರ್ಮದ ಶಿರೋವ್ರತದಲ್ಲಿ ಕೇವಲ ಸ್ಥೂಲಾಂಗದ ಇಷ್ಟಲಿಂಗ ಧಾರಣ ವೊಂದೇ ಹೇಳಿಲ್ಲ. ಲಿಂಗತ್ರಯಧಾರಣವೂ ಹೇಳಿದೆ:

"ತನುತ್ರಯಗತಾನಾದಿ ಮಲತ್ರಯಮಸೌ ಗುರುಃ
ದೀಕ್ಷಾತ್ರಯೇಣ ಸಂದಹ್ಯ ಲಿಂಗತ್ರಯಮುಪಾದಿಶತ್ ।

"ಸ್ವಾಗ್ರೇ ಸ್ಥಿತಸ್ಯ ಶಿಷ್ಯಸ್ಯ ದೇಶಿಕಃ ಕರುಣಾನಿಧಿಃ
ಕುರ್ಯಾದ್ದೀಕ್ಷಾಂ ಮಹಾಶೈವೀಮವಿದ್ಯಾಪಾಶಕೃಂತಿನೀಂ ।
ದೀಯತೇ ಲಿಂಗಸಂಬಂಧಃ ಕ್ಷೀಯತೇ ಚ ಮಲತ್ರಯಂ
ದೀಯತೇ ಕ್ಷೀಯತೇ ಯಸ್ಮಾತ್ ಸಾ ದೀಕ್ಷೇತಿ ನಿಗದ್ಯತೇ ।"

— ಕಾರಣಾಗಮ

ಇದು ಮಹಾಪಾಶುಪತ (ಅನಾದಿ ವೀರಶೈವ) ವಿಧಾನ. ತನುತ್ರಯ ವಿಶೋಧನ; ಮಲತ್ರಯ ನಿವಾರಣ; ಅಂಗತ್ರಯ ಕರಣ; ಲಿಂಗತ್ರಯ ಧಾರಣ.

ತನುತ್ರಯದಲ್ಲಿ ಕಾರ್ಮಿಕ ಮಾಯೀಯ ಆಣವೀಯ ಮಲತ್ರಯವು ಅನಾದಿ ಸಿದ್ಧವಾಗಿದೆ. ಇವನ್ನು ಶ್ರೀಗುರು ದೀಕ್ಷಾತ್ರಯ ಅಂದರೆ ಕ್ರಿಯಾ–ಮಂತ್ರ–ವೇಧಾ–ದೀಕ್ಷೆಗಳಿಂದ ಚನ್ನಾಗಿ ಸುಟ್ಟುಹಾಕಿ ಇಷ್ಟ–ಪ್ರಾಣ–ಭಾವ ಲಿಂಗಗಳನ್ನು ಉಪದೇಶಮೂಲಕ ಕರುಣಿಸಬೇಕು.

ಕರುಣಾನಿಧಿಯಾದ ದೇಶಿಕನು (ಶ್ರೀಗುರು) ತನ್ನೆದುರಿಗಿರುವ ಶಿಷ್ಯನಿಗೆ ಮಹಾಮಂಗಳಕರವಾದ ಅವಿದ್ಯಾಪಾಶವನ್ನು ಪರಿಹರಿಸುವ ದೀಕ್ಷೆಯನ್ನು ದಯಪಾಲಿಸಬೇಕು.

ಶಿಷ್ಯನ ಮೂರಂಗಗಳಲ್ಲಿ ಮೂರ್ಲಿಂಗಗಳನ್ನು ಕರುಣಿಸಿ, ಮೂರು ಮಲಗಳನ್ನು ಕಳೆಯಬೇಕು. ದೀಯತ್ವ–ಕ್ಷೀಯತ್ವ ಧರ್ಮವುಳ್ಳುದೆ ದೀಕ್ಷೆ! ಅಂದರೆ ಕೊಡುವ – ಕಳೆದ ಕಸುವುಳ್ಳುದೆ ದೀಕ್ಷೆ! ಅಂಗಗಳಲ್ಲಿ ಲಿಂಗಕಳೆಗಳು ಸಂಗಡಿಸಿದರೆ ಕಾರ್ಮಿಕಾದಿ ಮಲತ್ರಯಗಳು ತೊಲಗದಿರವು. ದೀಕ್ಷೆಯ ನಿರ್ವಚನ ದೀಪ್ತವಾಗಿದೆ. ದೀಕ್ಷಾದಾಯಕ ದೇಶಿಕನ ಚಿದ್ದೀಪ್ತಿ ಚಿಕ್ಕದಲ್ಲ, ಅದು ದೃಕ್ಕ್ರಿಯಾತ್ಮಕವಾದುದು. ಅದರಿಂದಾಗಿ ಅಂತೇವಾಸಿಯಲ್ಲಿ ಹೊಚ್ಚಹೊಸ ಬೆಳಗು ಮೂಡಿ ಬರುತ್ತದೆ; ಅಚ್ಚ ಅವಿರಳಾನುಭವಾನಂದವುಂಟಾಗುತ್ತದೆ.

"ಸಾ ದೀಕ್ಷಾ ಪರಮಾ ಶೈವೀ ತ್ರಿಧಾ ಭವತಿ ನಿರ್ಮಲಾ
ಏಕಾ ವೇಧಾತ್ಮಿಕಾ ಸಾಕ್ಷಾದನ್ಯಾ ಮಂತ್ರಾತ್ಮಿಕಾ ಮತಾ ।
ಕ್ರಿಯಾತ್ಮಿಕಾ ಪರಾ ಕಾಚಿ ದೇವಮೇವ ತ್ರಿಧಾ ಭವೇತ್ ॥
ಹಸ್ತಮಸ್ತಕ ಸಂಯೋಗಾದ್ವೃಷ್ಟೈರ್ವೇಧೇತಿ ಕೀರ್ತ್ಯತೇ

ಗುರುಣೋದೀರಿತಾ ಕರ್ಣೇ ಸಾ ಹಿ ಮಂತ್ರಾತ್ಮಿಕಾ ಭವೇತ್
ಶಿಷ್ಯಪಾಣಿತಲೇ ದತ್ತಾ ಯಾ ದೀಕ್ಷಾ ಸಾ ಕ್ರಿಯಾ ಭವೇತ್ ॥"

ಪರಶಿವಾತ್ಮಕವಾದ ಮಂಗಳಾತ್ಮಕವಾದ ಪರಮವಾದ ನಿರ್ಮಲವಾದ ಆ ದೀಕ್ಷೆಯು ಮೂರು ಬಗೆಯಾಗಿದೆ. ಒಂದು ಸಾಕ್ಷಾತ್ ವೇಧಾತ್ಮಿಕವಾಗಿದೆ. ಇನ್ನೊಂದು ಮಂತ್ರಾತ್ಮಿಕವಾಗಿದೆ. ಮತ್ತೊಂದು ಕ್ರಿಯಾತ್ಮಿಕವಾಗಿದೆ.

ಹಸ್ತಮಸ್ತಕ ಸಂಯೋಗ ಮತ್ತು ದೃಷ್ಟಿಯೋಗವುಳ್ಳುದು ವೇಧಾದೀಕ್ಷೆ. ಇದು ಸಂವೇದಾತ್ಮಕವಾದುದು; ಆನುಭಾವಿಕವಾದುದು. ಗುರು ಶಿಷ್ಯನ ಕಿವಿಯಲ್ಲಿ ವಾಚ್ಯವಾಗಿ ಬೋಧಿಸಿದುದೆ ಮಂತ್ರದೀಕ್ಷೆ. ಇದು ಜ್ಞಾನಪ್ರಧಾನವಾದುದು; ವರ್ಣಮಯವಾದುದು. ಶಿಷ್ಯನ ವಾಮಕರಸ್ಥಲದಲ್ಲಿ ಕುರುಹನ್ನು (ಇಷ್ಟಲಿಂಗವನ್ನು) ಕರುಣಿಸಿದುದೆ ಕ್ರಿಯಾದೀಕ್ಷೆ.

ಈ ಮೂರು ದೀಕ್ಷೆಗಳಲ್ಲಿ ಒಂದೊಂದು ಏಳು ಪ್ರಕಾರವಾಗಿದ್ದು ಇಪ್ಪತ್ತೊಂದು ಪ್ರಕಾರವಾಗುತ್ತದೆ.

"ಆಜ್ಞೋಪಮಾ ಚ ಕಲಶಾಭಿಷೇಕಾಖ್ಯಾ ತತಃ ಪರಂ
ಸ್ವಸ್ತಿಕಾರೋಹಣಂ ಭೂತಿಪಟ್ಟಮಾಯತ್ತಮೇವ ಚ
ಸ್ವಾಯತ್ತಮಿತಿ ಸಪ್ತೈತಾಃ ಕ್ರಿಯಾದೀಕ್ಷಾಂತರಾ ಮತಾಃ ।"

ಇವು ಏಳು ಕ್ರಿಯಾದೀಕ್ಷೆಗಳು.

"ತತ್ರೈಕಾಗ್ರಮತಿ ಸ್ಯಾದ್ಯಾ ದ್ವಿತೀಯಾ ತು ದೃಢವ್ರತಾ
ಪಂಚೇಂದ್ರಿಯಾರ್ಪಣಾಭಿಖ್ಯಾ ತೃತೀಯಾ ಪರಿಕೀರ್ತಿತಾ ।
ಅಹಿಂಸಾಖ್ಯಾ ತುರೀಯಾ ಸ್ಯಾಲ್ಲಿಂಗನಿಷ್ಠಾ ತು ಪಂಚಮೀ
ಅನಂತರಾ ವಿನಿರ್ದಿಷ್ಟಾ ಷಷ್ಠೀ ಲಿಂಗಮನೋಲಯಾ
ಸಪ್ತಮೀ ತು ಸಮಾಖ್ಯಾತಾ ಸದ್ಯೋಮುಕ್ತಿ ಸಮಾಹ್ವಯಾ ॥"

ಇವು ಏಳು ಮಂತ್ರದೀಕ್ಷೆಗಳು.

"ಆದ್ಯಾ ಸಮಯಸಂಜ್ಞಾ ಸ್ಯಾನ್ನಿಸ್ಸಂಸಾರಾ ದ್ವಿತೀಯಕಾ
ನಿರ್ವಾಣಾಖ್ಯಾ ತೃತೀಯಾ ಸ್ಯಾತ್ತತ್ತ್ವ ಸಂಜ್ಞಾ ಚತುರ್ಥಿಕಾ
ಪಂಚಮ್ಯಧ್ಯಾತ್ಮಸಂಜ್ಞಾ ಸ್ಯಾತ್ ಷಷ್ಠೀ ತತ್ತ್ವವಿಶೋಧಿನೀ

ಸಪ್ತಮೀ ತತ್ತ್ವಬೋಧಾ ಸ್ಯಾದ್ವೇಧಾ ದೀಕ್ಷಾಂತರಾ ಇಮಾಃ ॥"

ಇವು ಏಳು ವೇಧಾ ದೀಕ್ಷೆಗಳು. ಇವೆಲ್ಲ ಉಪಭೇದಗಳು.

ದೀಕ್ಷಾ ಮಂಟಪದಲ್ಲಿ ಕಲಶಗಳನ್ನು ಒಂಬತ್ತನ್ನಾಗಲಿ ಅಯ್ದನ್ನಾಗಲಿ ಹೂಡಬೇಕೆಂದು ಕಾರಣಾಗಮ ವಿಧಿಸಿದೆ. ಈ ಇಪ್ಪತ್ತೊಂದು ದೀಕ್ಷೆಗಳನ್ನು ವಿವರಿಸಿದೆ.

"ಶ್ರೀ ಪಂಚಕಲಶಾರ್ಥಂ ತು ಋತ್ವಿಜೋ ವೃಣುಯಾದ್ಗುರುಃ
ಚತುರ್ಣಾಂ ಚತುರಾಚಾರ್ಯಾ ಮಧ್ಯಸ್ಯ ಚ ಸ್ವಯಂ ಭವೇತ್।"

ಎಂದಿದೆ. ಹೆಚ್ಚಾಗಿ ಅಯ್ದು ಕಲಶಗಳಿಗೆ ಪ್ರಾಮುಖ್ಯತೆಯನ್ನಿತ್ತಿದೆ. ಸುತ್ತು ಇರುವ ನಾಲ್ಕು ಕಲಶಗಳಿಗೆ ಚತುರಾಚಾರ್ಯರು ಮತ್ತು ಮಧ್ಯದಲ್ಲಿರುವ ಕಲಶಕ್ಕೆ ಮುಖ್ಯನಾದ ಆಚಾರ್ಯನು ಹೀಗೆ ಪಂಚಾಚಾರ್ಯರು ಬೇಕೆಂದು ಹೇಳಿದೆ. ಪಂಚಾಚಾರ್ಯರ ನಿರೂಪಣವಿದೆ.

"ಪಂಚಗವ್ಯೇನ ಸಿದ್ಧೇನ ಶುದ್ಧೈಃ ಪಂಚಾಮೃತೈರಪಿ
ಅಭಿಷಿಂಚೇದಿಷ್ಟಲಿಂಗಂ ಪಂಚಬ್ರಹ್ಮ ಮನೂತ್ತಮೈಃ ।....
....ಸಂಸ್ಥಾಪ್ಯ ರುದ್ರಸೂಕ್ತೇನ ಸಂಸ್ನಾಪ್ಯ ತದನಂತರಂ....
....ಇಷ್ಟಲಿಂಗಂ ಸಮಾದಾಯ ವಾಮಹಸ್ತೇಽಭಿ ಪೂಜ್ಯ ಚ
ಸೌಮ್ಯೇ ತಲ್ಲಿಂಗಮೀಕ್ಷಸ್ವೇತೀಷ್ಟಲಿಂಗಂ ಪ್ರದರ್ಶಯೇತ್ ॥

— ಕಾರಣಾಗಮ

ಇಷ್ಟಲಿಂಗಧಾರಣ ಪೂರ್ವದಲ್ಲಿ ಇರಲಿಲ್ಲವೆನ್ನುವವರು ಇವುಗಳನ್ನು ಮನಸ್ಕರಿಸಬೇಕು. ಇಲ್ಲಿ ಇಷ್ಟಲಿಂಗ ಶುದ್ಧಿ ವಿಧಾನ ನಿರೂಪಿತವಾಗಿದೆ. "ಇಷ್ಟಲಿಂಗಾತ್ಪರಂ ವಸ್ತು ಶಿಷ್ಯತ್ವಂ ನಾವಲೋಕಯ" ಎಂದು ಗುರು ಶಿಷ್ಯನಿಗೆ ಇಷ್ಟಲಿಂಗ ನಿಷ್ಠೆಯನ್ನು ಶ್ರೇಷ್ಠತೆಯನ್ನು ಬೋಧಿಸಿದ್ದಾನೆ.

"ಷಡಧ್ವಶೋಧನ ದ್ವಾರಾ ಮಾಂಸಪಿಂಡನಿವೃತ್ತಯೇ
ಸ್ವಸ್ತಿಕಾರೋಹಣಾಭಿಖ್ಯಾಂ ದೀಕ್ಷಾಂ ದದ್ಯಾದ್ಯಥಾವಿಧಿ।

ಲಿಂಗಸಂಸ್ಕಾರದಂತೆ ಅಂಗಸಂಸ್ಕಾರವೂ ಅಂದೇ ಆ ಮಹಾಪಾಶುಪತ ಧರ್ಮದಲ್ಲಿಯೇ ವಿಧಾನವಾಗಿದೆ. ಅನಾದಿ ಮಲ ಸಂಹಾರಕ್ಕಾಗಿ ಭೂತಿಪಟ್ಟಾಖ್ಯ

ದೀಕ್ಷೆಯ ವಿಧಾನವೂ ನಿರೂಪಿತವಾಗಿದೆ. ವಿಸ್ತಾರಭಯದಿಂದ ಇಲ್ಲಿ ಹೆಚ್ಚಾಗಿ ಹೇಳಿಲ್ಲ.

"ಪ್ರಾಣೇ ಲಿಂಗಂ ಪ್ರತಿಷ್ಠಾಪ್ಯ ಲಿಂಗೇ ಪ್ರಾಣಂ ನಿಧಾಯ ಚ
ಲಿಂಗಂ ನಿರೀಕ್ಷಮಾಣಸ್ಸನ್ ಲಿಂಗಪ್ರಾಣೀ ಸದಾ ಭವ ।"

ಸ್ವಾಯತ್ತೀಕರಣ ವಿಧಾನ ವಿನ್ಯಾಸ ವೈಶಿಷ್ಟ್ಯವನ್ನಿಲ್ಲಿ ಕಾಣಬೇಕು. ಇಷ್ಟಲಿಂಗದಲ್ಲಿಯೇ ಪ್ರಾಣವನ್ನು ಇಟ್ಟರೆ, ದಿಟ್ಟ ನಟ್ಟರೆ ಲಿಂಗಪ್ರಾಣಿ; ಪ್ರಾಣದಲ್ಲಿ ಪ್ರಕೃತಿ ಭಾವವನ್ನು ಪರಿಹರಿಸಿ ಲಿಂಗವನ್ನು ಪ್ರತಿಷ್ಠಿಸಿದರೆ ಪ್ರಾಣಲಿಂಗಿ; ಎಂಬೀ ಧ್ವನಿ ಇಲ್ಲಿ ಪರಿಭಾವಿತವಾಗುತ್ತದೆ.

"ಹಿತ್ವಾ ಬಂಧುಜನೇ ಪ್ರೀತಿಂ, ತಾಂ ಭಕ್ತೇಷು ಸ್ಥಿರಾಂ ಕುರು
ಏವಂ ಸಮಯಮಾದಿಶ್ಯ ನಿಸ್ಸಂಸಾರಾಂ ನಿಬೋಧಯೇತ್ ।
ದೇಹೇಂದ್ರಿಯಾದಿ ಸಂಸಾರಂ ಪರಿಹೃತ್ಯ ಸದಾ ಮಮ
ಪೂಜೋಪಚಾರಸ್ಸಂಸಾರ **ಇತಿ** ಭಾವಯ ಚೇತಸಿ ।
ಇತ್ಯಾದಿಶ್ಯ ಚ ದದ್ಯಾಚ್ಚ ದೀಕ್ಷಾಂ ನಿರ್ವಾಣಸಜ್ಞಿತಾಂ ।

ಬಂಧು ಜನ ಪ್ರೇಮನ್ನುಳಿದು ಭಕ್ತಜನ ಪ್ರೇಮವನ್ನು ಬೆಳಸುವುದೆ ಸಮಯದೀಕ್ಷೆ. ದೇಹೇಂದ್ರಿಯಾದಿಗಳ ಸಂಸಾರವನ್ನುಳಿದು ಶಿವಲಿಂಗ ಪೂಜೋಪಚಾರ ರೂಪ ಸಂಸಾರವನ್ನು ಬೆಳಸುವುದೆ ನಿಜ ಸಂಸಾರ–ನಿಸ್ಸಂಸಾರ ದೀಕ್ಷೆ. ಮಲತ್ರಯದಿಂದ ಉಂಟಾಗುವ ತಾಪತ್ರಯದಿಂದ ವ್ಯಾಕುಲನಾಗದಿರುವುದೆ ನಿರ್ವಾಣದೀಕ್ಷೆ. ಲಿಂಗಾಂಗತತ್ತ್ವವನ್ನು ತಿಳಿದು ಲಿಂಗಸಾಯುಜ್ಯದಲ್ಲಿರುವುದೆ ಆಧ್ಯಾತ್ಮದೀಕ್ಷೆ.

"ಶಬ್ದಾದೀನ್ವಿಷಯಾನ್ ಸರ್ವಾಂಸ್ತತ್ತದಿಂದ್ರಿಯಗೋಚರಾನ್
ಆಚಾರಲಿಂಗಮುಖ್ಯೇಭ್ಯಃ ಷಡ್ಲಿಂಗೇಭ್ಯಃ ಸಮರ್ಪಯನ್ ।
ವರ್ತಸ್ವ ಶುದ್ಧಧೀರ್ನಿತ್ಯಂ ಪ್ರಯತೋಽಪಿ ಜಿತೇಂದ್ರಿಯಃ
ಉಪದಿಶ್ಯೈವಮಪಿ ಚ ದತ್ವಾತ್ಮತತ್ತ್ವೋಪದೇಶಿನೀಂ ।....
ಸಚ್ಚಿತ್ಸುಖನಿಜಾಕಾರಂ ಲಿಂಗಂ ಯದ್ಬ್ರಹ್ಮಸಜ್ಞಿತಂ
ತದಸಿ ತ್ವಮುಪಾಸ್ವಾತಸ್ತದೇವಾಹಮಿತಿ ಧ್ರುವಂ ।
ವೇಧಾಖ್ಯಯಾ ದೀಕ್ಷಯೈವಂ ಶಿಷ್ಯಮಾದಿಶ್ಯ ದೇಶಿಕಃ ॥"

— ಕಾರಣಾಗಮ

ಷಟ್‌ಸ್ಥಲಾತ್ಮಕ ತತ್ತ್ವೋಪದೇಶ ಇಲ್ಲಿ ನಿರ್ದೇಶಿತವಾಗಿದೆ. ಷಡಂಗನು ಷಡ್ಲಿಂಗ ಸಮಾರಾಧನ ಸಮರ್ಪಣ ವಿಧಾನವಿದೆ

ಗಂಧವನ್ನು ಆಚಾರಲಿಂಗಕ್ಕೆ, ರಸವನ್ನು ಗುರುಲಿಂಗಕ್ಕೆ, ರೂಪವನ್ನು ಶಿವಲಿಂಗಕ್ಕೆ, ಸ್ಪರ್ಶವನ್ನು ಚರಲಿಂಗಕ್ಕೆ, ಶಬ್ದವನ್ನು ಪ್ರಸಾದಲಿಂಗಕ್ಕೆ, ತೃಪ್ತಿಯನ್ನು ಮಹಾಲಿಂಗಕ್ಕೆ ಸಮರ್ಪಿಸಿ ಆ ಪ್ರಸಾದ ಗ್ರಾಹಿಯಾಗಿ ಅನುದಿನ ವರ್ತಿಸಬೇಕು. ಇದರಿಂದ ಜಿತೇಂದ್ರಿಯತ್ವ ಲಭಿಸುತ್ತದೆ. ಲಿಂಗವೆಂದರೆ ಇನ್ನೇನಲ್ಲ, ಸಚ್ಚಿದಾನಂದ ಸ್ವರೂಪ ಪರಶಿವ ಬ್ರಹ್ಮವಾಗಿದೆ. ಅದುವೇ ನೀನು; ನೀನೇ ಅದು. ಈ ಸಮರಸಭಾವವಿರಬೇಕು.

> "ಸತ್ಯಹಂ ಮತ್ಪತಿರ್ಲಿಂಗಮಿತಿ ನಿಶ್ಚಿತ್ಯ ಚೇತಸಿ
> ಸದಾ ತನುಮನೋಭಾವಾನಿಷ್ಟಾದಿಭ್ಯಃ ಸಮರ್ಪಯ
> ಇತ್ಯಾದಿಶ್ಯ ತತೋ ದದ್ಯಾದಹಿಂಸಾಸಂಜ್ಞಿತಾಂಗುರುಃ
> ಸರ್ವಾಣೀಮಾನಿ ಭೂತಾನ್ಯಪ್ಯಾತ್ಮವತ್ಪರಿ ಭಾವಯನ್
> ಮಾ ಹಿಂಸೀರಿತ್ಯುಪಾದಿಶ್ಯ ಲಿಂಗನಿಷ್ಠಾಮುಪಾದಿಶತ್ ||"

ಅಂಗಸತಿ ಲಿಂಗಪತಿ ಎಂಬ ಭಾವ ನಿಶ್ಚಯವಾಗಿ ತನು ಮನ ಭಾವಗಳನ್ನು ಪರಿವಿಡಿದು ಇಷ್ಟ-ಪ್ರಾಣ-ಭಾವಲಿಂಗಗಳಿಗೆ ಸಮರ್ಪಿಸಬೇಕು. ಮೇಲೆ ನಾಸಿಕಾದಿ ಷಡಂಗಾರ್ಪಣ ವಿಧಾನದ ಬಳಿಕ ತ್ರಿವಿಧಾಂಗಾರ್ಪಣ ವಿಧಾನ ನಿರೂಪಣವಾಗಿ ನವಾಂಗಾರ್ಪಣ ವಿಧಾನ ಸಮಾಪ್ತವಾಯಿತು. ಹೀಗೆ ಸ್ವಾತ್ಮ ಸಾಧನ ಪಥದಲ್ಲಿ ಒಂದು ಗುರಿಗೆ ಬಂದ ಅಂಗನು ಸರ್ವಭೂತ ದಯಾಪರನಾಗಿರಬೇಕು. ತನ್ನಂತೆ ಎಲ್ಲ ಜೀವಿಗಳನ್ನು ಕಾಣಬೇಕು. ಇದುವೇ ನಿಜವಾದ ಆತ್ಮಧರ್ಮ, ಮಹಾಪಾಶುಪತಧರ್ಮ. ಏಕೆಂದರೆ ಎಲ್ಲದರದಲ್ಲಿಯೂ ಲಿಂಗಚೇತನವಿರುತ್ತದೆ. ಅದು ಪರಿಚ್ಛೇದ ಶೂನ್ಯವಾದ ವಸ್ತು.

> "ಆದಿ ಮಧ್ಯಾಂತರಹಿತಂ ಲಿಂಗಂ ಯದ್ಬ್ರಹ್ಮಸಂಜ್ಞಿತಂ
> ತನ್ನಿಷ್ಠೋ ಭವ ಸದ್ಬುದ್ಧ ಇತ್ಯುಪಾದಿಶ್ಯ ಸದ್ಗುರುಃ |"

ಹೀಗೆ ಅಂಗಲಿಂಗ ನಿಜಲಕ್ಷಣ ನಿರ್ಣಯವನ್ನು ಗುರು ಶಿಷ್ಯನಿಗೆ ವಿಶುದ್ಧ ವಿಶಾಲ ಮನೋಭಾವದಿಂದ ಉಪದೇಶಿಸಿ ಬಳಿಕ ಶಿಷ್ಯನೊಳಗಿರುವ ಆ ಚಿತ್ಕಳೆಯನ್ನು ತನ್ನ ದೃಷ್ಟಿ ಮನೋಭಾವಗಳಿಂದ ಆಕರ್ಷಿಸಿ ಇಷ್ಟಲಿಂಗದಲ್ಲಿರಿಸಬೇಕು.

"ಜ್ವಲತ್ಕಾಲಾನಲಾಭಾಸಾ ತಟಿತ್ಕೋಟಿ ಸಮಪ್ರಭಾ
ತಸ್ಯೋರ್ಧ್ವೇತು ಶಿಖಾ ಸೂಕ್ಷ್ಮಾ ಚಿದ್ರೂಪಾ ಪರಮಾಕಲಾ ।
ಯಥಾ ಕಲಾ ತಥಾ ಭಾವೋ ಯಥಾ ಭಾವಸ್ತಥಾ ಮನಃ
ಯಥಾ ಮನಸ್ತಥಾ ದೃಷ್ಟಿರ್ಯಥಾ ದೃಷ್ಟಿಸ್ತಥಾ ಸ್ಥಲಂ ।
ಜಲಕುಂಭಾಗ್ರಸದ್ವ್ಯಾಪ್ತ ತೈಲಬಿಂದುರ್ಯಥಾ ತಥಾ
ದೇಹ ಪ್ರಾಣಾತ್ಮಸು ವ್ಯಾಪ್ತಾ ಸಂಸ್ಥಿತಾ ಶಾಂಭವೀ ಕಲಾ ।
ಯಾ ಕಲಾ ಪರಮಾ ಸೂಕ್ಷ್ಮಾ ತತ್ವಾನಾಂ ಬೋಧಿನೀ ಪರಾ
ತಾಮಾಕೃಷ್ಯ ಯಥಾ ನ್ಯಾಯಂ ಲಿಂಗೇ ಸಮುಪವೇಶಯೇತ್
ಪ್ರಾಣ ಪ್ರತಿಷ್ಠಾಮಂತ್ರಂ ಚ ಮೂಲಮಂತ್ರಂ ಪಠೇದಪಿ ।
ಅಥಾಸ್ಮಿನ್ ಸಂಸ್ಕೃತೇ ಲಿಂಗೇ ಸುಸ್ಥಿರೋ ಭವ ಸರ್ವದಾ
ಕಿಂಚ ಭಕ್ತೈಕಗಾತ್ರಸ್ತ್ವಂ ಭವೇತ್ಯಭ್ಯರ್ಥಯೇಚ್ಚ ಮಾಂ ॥"

— ಕಾರಣಾಗಮ

ಲಿಂಗ ಬೇರೆಯಲ್ಲ ಚಿತ್ಕಳೆ ಬೇರೆಯಲ್ಲ. ಆ ಅಪಾರಕಳೆಯನ್ನು ಶ್ರೀಗುರು ಕಲೆಯನ್ನಾಗಿಸಿ ಕರಸ್ಥಲಕ್ಕೆ ಚುಳುಕಾಗಿಸಿದ ಶಕ್ತಿ ಸಂಪನ್ನತೆಯನ್ನಿಲ್ಲಿ ನೋಡಬೇಕು. ಜೊತೆಗೆ ಕಾರಣಾಗಮಿಕ ಶಿವಾಚಾರ್ಯನ ಚಿತ್ಕಳಾನುಭೂತಿಯನ್ನು ನುಡಿಲಿಂಗದಲ್ಲಿ ಸೊಗಸಾಗಿ ಅವತರಣಗೊಳಿಸಿದ ಶಕ್ತಿ ಸಂಪತ್ತಿಯನ್ನು ಮನಗಾಣಬೇಕು.

ಆ ಚಿತ್ಕಳೆ ಸಾಮಾನ್ಯ ಜ್ಯೋತಿಯಲ್ಲ. ಪ್ರಳಯಾಗ್ನಿಯಂತೆ ಕೋಟಿ ಮಿಂಚಿನ ಗೊಂಚಲಂತೆ ಪ್ರಕಾಶಮಾನವಾದುದು. ಅದನ್ನು ಶ್ರೀಗುರು ತನ್ನ ಶಿವಯೋಗಬಲದಿಂದ ಶಿಖಾಚಕ್ರಕ್ಕೆ ತಂದು ಪರಮ ಕಲೆಯನ್ನಾಗಿಸಿ ಆ ಪರಮಕಲೆಯಂತೆ ಭಾವ, ಭಾವದಂತೆ ಮನ, ಮನದಂತೆ ದೃಷ್ಟಿ, ದೃಷ್ಟಿಯಂತೆ ಕರಸ್ಥಲವನ್ನಾಗಿಸಿ, ನೀರ್ಗೊಡದಲ್ಲಿ ಬಿದ್ದ ಎಣ್ಣೆಹನಿಯೊಂದು ನೀರ್ಗೊಡವನ್ನೆಲ್ಲ ಬಳಸಿರುವಂತೆ, ಶಿಷ್ಯನ ದೇಹ ಪ್ರಾಣ ಆತ್ಮಗಳಲ್ಲಿ ವ್ಯಾಪಿಸುವಂತೆ ಮಾಡುವನು. ತ್ಯಾಗಾಂಗದಲ್ಲಿ ಸದ್ರೂಪ ಕ್ರಿಯಾಲಿಂಗವನ್ನಾಗಿಸಿ ಭೋಗಾಂಗದಲ್ಲಿ (ಪ್ರಾಣದಲ್ಲಿ) ಚಿದ್ರೂಪ ಪ್ರಾಣಲಿಂಗವನ್ನಾಗಿಸಿ, ಯೋಗಾಂಗದಲ್ಲಿ (ಆತ್ಮನಲ್ಲಿ) ಆನಂದರೂಪ ಭಾವಲಿಂಗವನ್ನಾಗಿಸಿ ಪ್ರತಿಷ್ಠಿಸಿ ಅನುಗ್ರಹಿಸುವನು.

ಅತ್ಯಂತ ಸೂಕ್ಷ್ಮವಾದ ಆ ಪರಮಕಲೆಯನ್ನು ತನ್ನ ಯೋಗ ಬಲದಿಂದ ಆಕರ್ಷಿಸಿ ಲಿಂಗದಲ್ಲಿ ಸಂಗಡಿಸುವನು. ಪ್ರಾಣ ಪ್ರತಿಷ್ಠಾಮಂತ್ರವನ್ನು ಮೂಲಮಂತ್ರವನ್ನು ಶ್ರೀಗುರು ಪಠಿಸುವನು. ತಾನು ದೀಕ್ಷೆಯಿಂದ ಸಂಸ್ಕರಿಸಿದ ಲಿಂಗದಲ್ಲಿ ಸರ್ವಕಾಲದಲ್ಲಿ ಸುಸ್ಥಿರವಾಗಿ ಭಕ್ತೈಕಗಾತ್ರನಾಗಿ ಅಂದರೆ ಭಕ್ತನಷ್ಟೇ ಚುಳುಕಾಗಿ ಇರೆಂದು ಚಿತ್ಕಳೆಯನ್ನು ಸದ್ಗುರು ಪ್ರಾರ್ಥಿಸುವನು. ಇತ್ತ ಶಿಷ್ಯನಿಗೆ ಹೀಗೆ ಆದೇಶಿಸುವನು :

"ಮಾ ಭೂಯಾ ಭೌತಿಕಪ್ರಾಣೀ ಲಿಂಗಪ್ರಾಣೀ ಭವೇತಿ ಚ
ಶಿಷ್ಯಮಾದಿಶ್ಯ ದದ್ಯಾಚ್ಚ ಪಾದತೀರ್ಥ ಪ್ರಸಾದಕೌ ।
ಭೂಯೋಽಪ್ಯುಪದಿಶೇಚ್ಛಿಷ್ಯಂ ಸದ್ಗುರುಃ ಕರುಣಾನಿಧಿಃ
ಮಾಹೇಶ್ವರಾನ್ ಗುರುಂ ಲಿಂಗಂ ಸಮ್ಯಗರ್ಚಯ ನಿತ್ಯಶಃ ।
ಅಷ್ಟಾವರ್ಣೇಷು ತ್ವಂ ಶ್ರದ್ಧಾ ಕುರು ಪ್ರಯತ್ನತಃ
ಪ್ರವರ್ತಸ್ವ ಮಹಾಬುದ್ಧೇ ಪಂಚಾಚಾರೇಷ್ವಪಿ ಕ್ರಮಾತ್ ।
ಇತಿ ಸಂಬೋಧ್ಯ ಭೂಯೋಽಪಿ ಪ್ರಾಣಾನಾಯಮ್ಯ ದೇಶಿಕಃ
ಅಂಗಲಿಂಗ ಪ್ರತಿಷ್ಠಾಖ್ಯಾಂ ದೀಕ್ಷಾಂಶಿಷ್ಯಸ್ಯ ಧೀಮತಃ ।
ಕರಿಷ್ಯ ಇತಿ ಸಂಕಲ್ಪ್ಯ ಲಿಂಗಂ ಬಧ್ವಾ ಸುವಾಸಸಾ
ಶಿಷ್ಯಸ್ಯ ಕಂಠೇ ಹಸ್ತೇ ವಾ ಬಧ್ನೀಯಾತ್ತದನಂತರಂ
ಗುರ್ವಂತೇ ವಾಸಿನೋರ್ವಾಸ ಆಚ್ಛಾದಕಮನೂತ್ಸೃಜೇತ್ ॥"

—ಕಾರಣಾಗಮ

ಓ ಶಿಷ್ಯನೇ, ನೀನು ಭೌತಿಕಪ್ರಾಣಿ ಆಗಬೇಡ, ಲಿಂಗಪ್ರಾಣಿ ಆಗು, ಹೀಗೆಂದು ಹೇಳಿ ಪಾದೋದಕ ಪ್ರಸಾದಗಳನ್ನು ಕರುಣಿಸಬೇಕು. ಕರುಣಿಸಿ ಬಳಿಕ ಗುರುವನ್ನು ಲಿಂಗವನ್ನು ಮಾಹೇಶ್ವರರನ್ನು ನಿತ್ಯ ಚನ್ನಾಗಿ ಅರ್ಚಿಸೆಂದು ಉಪದೇಶಿಸುವನು. ಅಷ್ಟಾವರಣಗಳಲ್ಲಿ ಶ್ರದ್ಧೆಯನ್ನು ಇಡು. ಪಂಚಾಚಾರಗಳಲ್ಲಿ ಪಠಿವಿಡದು ಪ್ರವರ್ತಿಸು. ಹೀಗೆ ಶಿಷ್ಯನಿಗೆ ಸಂಬೋಧಿಸಿ ಶ್ರೀಗುರು ಪ್ರಾಣಾಯಾಮವನ್ನಾಚರಿಸಿ ಸಂಸ್ಕಾರದಿಂದ ಧೀಮಂತನಾದ ಶಿಷ್ಯನಿಗೆ ಅಂಗಲಿಂಗ ಪ್ರತಿಷ್ಠಾರೂಪ ದೀಕ್ಷೆಯನ್ನು ಮತ್ತೆ ಮಾಡುವೆನೆಂದು ಸಂಕಲ್ಪಿಸಿ ಒಳ್ಳೆ

ತಾದ ಬಟ್ಟೆಯಲ್ಲಿ ಲಿಂಗವನ್ನು ಕಟ್ಟಿ ಶಿಷ್ಯನ ಕಂಠದಲ್ಲಾಗಲಿ ಹಸ್ತದಲ್ಲಾಗಲಿ ಧರಿಸಬೇಕು. ದೀಕ್ಷಾಮಂಟಪದಿಂದ ಹೊರಡಲು ಅಪ್ಪಣೆಯನ್ನೀಯಬೇಕು.

"ಗುರವೇऽಥ ಸ ಶಿಷ್ಯಸ್ತು ಪ್ರಣಾಮತ್ರಯಮಾಚರೇತ್
ಗೋ ಭೂಮಾದ್ಯೈರ್ಮಹಾದಾನೈರ್ದೇಶಿಕಂ ಪರಿತೋಷಯೇತ್ ।"

ಹೀಗೆ ಗುರುಕರುಣೆಯನ್ನು ಪಡೆದ ಶಿಷ್ಯನು ತನ್ನ ಗುರುವಿಗೆ ಮೂರುಸಲ ಪೊಡಮಡಬೇಕು. ಹಸು ಹೊಲ ಮೊದಲಾದ ಮಹಾದಾನಗಳನ್ನಿತ್ತು ಶ್ರೀಗುರುವನ್ನು ಸಂತೋಷಗೊಳಿಸಬೇಕು.

ನಿಗಮಾಗಮಗಳಲ್ಲಿ ಇದಕ್ಕಿಂತ ಉತ್ತಮವಾದ ಮೋಕ್ಷಪ್ರದವಾದ ಸಾಧನ ಬೇರೊಂದಿಲ್ಲ. ಇದು ಸದ್ಯೋಮುಕ್ತಿಪ್ರದವಾದ ವ್ರತ. ಇದು ಮಹಾ ಪಾಶುಪತಮತ. ಇದರಿಂದ ಒಂದೇ ಜನ್ಮದಲ್ಲಿ ಭಕ್ತಿ ಮುಕ್ತಿಗಳು ಲಭಿಸುತ್ತವೆ.

"ಗುರು ಪ್ರಸಾದಾತ್ಪರಮಂ ವ್ರತಂ ಪಾಶುಪತಾಭಿದಂ
ದೇಶಿಕಸ್ಯ ಪ್ರಸಾದೇನ ಯೇನ ಲಬ್ಧಮಿದಂ ವ್ರತಂ
ನ ತಂ ಮಾಯಾऽನುಬಧ್ನಾತಿ ನ ಸ ಭೂಯೋऽಭಿಜಾಯತೇ ।
ಗುರುಬೋಧಾಗ್ನಿನಾ ದಗ್ಧಾ ಯಸ್ಯ ಪಾಶಾಹ್ಯಶೇಷತಃ
ತಸ್ಯ ನಿರ್ದಗ್ಧ ಬಂಧಸ್ಯ ಪುನರ್ಬಂಧಃ ಕಥಂ ಭವೇತ್ ? ।
ಗುರುಕಾರುಣ್ಯಪೀಯೂಷರಸಾಸ್ವಾದವಿನೋದಿನಃ
ಅಮೃತಸ್ಯಾಸ್ಯ ನಿಕಟಂ ಕಥಂ ಮೃತ್ಯುಃ ಪ್ರಯಾಸ್ಯತಿ ? ।
ಗುರುದತ್ತ ಪರಜ್ಞಾನ ಪ್ರಕಾಶವಿಲಸದ್ದೃಶಃ
ಭಾಸ್ವತಸ್ತಸ್ಯ ತು ತಮಃ ಸಕಾಶಂ ಕಥಮೇಷ್ಯತಿ ?।
ಅನವಧ್ಯಸ್ಸದಾನಂದ ತುಂದಿಲಸ್ಯ ಮಹಾಮತೇಃ
ವಿದುಷೋ ನಿತ್ಯತೃಪ್ತಸ್ಯ ಕಥಂ ಶೋಕೋ ಭವಿಷ್ಯತಿ ? ॥"

— ಕಾರಣಾಗಮ.

ಪರಮ ಪಾಶುಪತಾಭಿದವ್ರತವಿದು ಗುರುಪ್ರಸಾದದಿಂದ ಯಾರಿಗೆ ಲಭಿಸುವುದೋ ಅವರಿಗೆ ಮಾಯೆಯಿಲ್ಲ, ಮತ್ತೆ ಜನ್ಮವಿಲ್ಲ.

ಗುರುಬೋಧ ಅದೊಂದು ಮಹಾಗ್ನಿ. ಅದರಲ್ಲಿ ಪಾಶಪೂರ್ಣವಾಗಿ ಸುಟ್ಟ ಬಳಿಕ ಬಂಧವಿಲ್ಲ; ಭವವಿಲ್ಲ. ಪಾಶವಿಲ್ಲವಾಗಿ ಆತ ಪಶುವಲ್ಲ.

ಗುರುಕಾರುಣ್ಯಾಮೃತರಸವನ್ನು ಆರೋಗಿಸಿ ಆನಂದಿಸುವಾತನು ಅಮೃತಾತ್ಮನಾಗುತ್ತಾನೆ. ಆತನಿಗೆ ಮೃತ್ಯುಭಯವಿಲ್ಲ. ಆತನ ಬಳಿಗೆ ಮಿತ್ತು ಸುಳಿಯದು.

ಗುರುದತ್ತವಾದ ಘನಜ್ಞಾನ ಪ್ರಕಾಶದಿಂದ ಅರಳಿದ ಕಣ್ಣುಳ್ಳವನಿಗೆ ಕತ್ತಲೆಯು ಹತ್ತಿರ ಸುಳಿಯದು. ಅಂದರೆ ಅಜ್ಞಾನಾವರಣವಾಗದು.

ಅಚ್ಚಳಿಯದ ಆನಂದದಿಂದ ತುಂದಿಲನಾದ ಮಹಂತನಾದ ಮತಿವಂತನಾದ ನಿತ್ಯತೃಪ್ತನಿಗೆ ಶೋಕವುಂಟಾಗದು.

ಇದು ಕ್ರಿಯಾಪಾದವಾದುದರಿಂದ ಈ ಪ್ರಕರಣದಲ್ಲಿ ಬರುವ ವ್ರತವೆಂದರೆ ಕ್ರಿಯೆ, ಮತವೆಂದರೆ ಜ್ಞಾನವೆಂದು ವಾಚಕರು ಪರಿಭಾವಿಸಬೇಕು.

ಭಾವಪ್ರಧಾನವಾದ ಕ್ರಿಯೆಜ್ಞಾನಗಳು. ಈ ಆಗಮೋಕ್ತಿಯಲ್ಲಿ ವಿಶ್ವಾಸವುಳ್ಳವರೆ ಇದಕ್ಕೆ ಅಧಿಕಾರಿಗಳು; ಮಾನ್ಯರು; ಮುಕ್ತಿಗೆ ಅರ್ಹರು.

— ೨ —

ಜ್ಞಾನದಿಂದಲೆ ಮುಕ್ತಿ ಎಂಬುದು ವೇದಾಂತವಲ್ಲದೆ ಸಿದ್ಧಾಂತವಲ್ಲ. ಜ್ಞಾನದಂತೆ ಕ್ರಿಯೆ(ವ್ರತ)ಯೂ ಬೇಕೆನ್ನುತ್ತದೆ ವೀರಶೈವ ಸಿದ್ಧಾಂತ ! ಕ್ರಿಯೆಯಿಲ್ಲದೆ ಅಂಗಾಂಗಶುದ್ಧಿ ಸಮನಿಸದು. ಶುದ್ಧಿಯಿಲ್ಲದೆ ಜ್ಞಾನ ಸಿದ್ಧಿಸದು. ಇವೆರಡೂ ಇಲ್ಲದೆ ಅನುಭವ ವೃದ್ಧಿಸದು; ಕೇವಲಾನಂದ ಅಳವಡದು. ಅವಿರಳತೆಯೊದಗದು. ಇದನರಿದು ಗಿರಿಜೆಯು ಕಾರಣಾಗಮದ ಎರಡನೆಯ ಪಟಲದಲ್ಲಿ ಹೀಗೆ ಕೇಳಿದ್ದಾಳೆ.

"ಜ್ಞಾನೇನ ನ ವಿನಾ ಮುಕ್ತಿರ್ಯದಿ ಸ್ಯಾದ್ದೇಹಧಾರಿಣಾಂ
ವ್ರತೇನಾಽನುಷ್ಠಿತೇನ ಸ್ಯಾತ್ ಕಿಂ ಫಲಂ ಬ್ರೂಹಿ ತತ್ತ್ವತಃ ।"

— ಕಾರಣಾಗಮ

ದೇಹಧಾರಿಗಳಾದ ಮಾನವರಿಗೆ ಜ್ಞಾನವಿಲ್ಲದೆ ಮುಕ್ತಿ ಆಗುವುದಿಲ್ಲೆಂದು ಹೇಳುವುದಾದರೆ, ಅನುಷ್ಠಿತ ವ್ರತಕ್ಕೆ ಅಂದರೆ ಕ್ರಿಯೆಗೆ ಫಲವಾವುದು ಎಂಬುದನ್ನು ತಾತ್ತ್ವಿಕವಾಗಿ ತಿಳಿಹೇಳು ಗಿರೀಶನೆ ಎಂದಿದ್ದಾಳೆ. ಜ್ಞಾನವೊಂದರಿಂದಲೆ ಮುಕ್ತಿ (ಜ್ಞಾನಾದೇವ ತು ಕೈವಲ್ಯಂ) ಎಂದು ಹೇಳಿದ ಮೇಲೆ ವ್ರತಾ

ತ್ಮಕ ಕ್ರಿಯೆಯ ಕೆಲಸವೇನು ? ಅನುಷ್ಠಿತ ವ್ರತಕ್ಕೆ ಫಲವಿಲ್ಲದಂತಾಗುತ್ತದೆ. ಇಂತಿರುವಾಗ ನೀವು ಹಿಂದೆ ದೀಕ್ಷಾವ್ರತ(ಕ್ರಿಯೆ)ವನ್ನು ನಿರೂಪಿಸಿ ಫಲವಿಲ್ಲದಾಯಿತು ಎಂಬರ್ಥದಲ್ಲಿ ಗಿರಿಜೆಯ ಪ್ರಶ್ನೆಯಿದೆ. "ತತ್ತ್ವತಃ ಬ್ರೂಹಿ" ಎಂದು ಹೇಳಿ ತಾತ್ತ್ವಿಕ ಉತ್ತರವನ್ನು ಅಪೇಕ್ಷಿಸಿದ್ದಾಳೆ. ಅದಕ್ಕೆ ಉತ್ತರವಿದು:

"ತಥಾಽಪಿ ಜ್ಞಾನಸಂಪ್ರಾಪ್ತಿರ್ವ್ರತೇನ ನ ವಿನಾ ಭವೇತ್
ಜ್ಞಾನೋಪದೇಶಃ ಕಾರ್ತ್ಸ್ನ್ಯೇನ ವ್ರತೇಽಸ್ಮಿನ್ನುಚ್ಯತೇ ಕಿಲ
ವ್ರತೇನಾನೇನ ನ ವಿನಾ ಜ್ಞಾನಾಯಾಧಿಕೃತೋ ಭವೇತ್ ।"

— ಕಾರಣಾಗಮ

ಆಹುದು ಗಿರಿಜೆ ! ವ್ರತಾತ್ಮಕ ಕ್ರಿಯೆಯಿಲ್ಲದೆ ಜ್ಞಾನಸಂಪತ್ತು ಪ್ರಾಪ್ತಿಸದು. ಆದರಿಂದಾಗಿ ಕ್ರಿಯೋಪದೇಶವಾದ ಬಳಿಕ ಜ್ಞಾನೋಪದೇಶವನ್ನು ಮಾಡಲಾಯಿತು. ಕ್ರಿಯೆಯಿಲ್ಲದೆ ಜ್ಞಾನ ಸಫಲತೆಯನ್ನು ಪಡೆಯದು.

"ಅದೀಕ್ಷಾಽ ಸಂಸ್ಕೃತೇ ಜಂತಾವಪವಿತ್ರ ಹೃದಾಕುಲೇ
ಉಪದಿಷ್ಟಮಪಿ ಜ್ಞಾನಂ ಮರುವನ್ನಪ್ರರೋಹತಿ ।
ಲಬ್ಧಂ ಕಥಮಪಿ ಜ್ಞಾನಂ ಲಿಂಗನಿಷ್ಠಾವಿವರ್ಜಿತೇ
ನ ಫಲಾಯ ಭವತ್ಯೇವ ಯಥಾ ಸಸ್ಯಮರಕ್ಷಿತಂ ।
ದೀಕ್ಷಾ ಸಂಸ್ಕೃತಿ ಸಂಶುದ್ಧೇ ಚಿತ್ತೇ ಜಂತೋಸ್ಸಮರ್ಪಿತಂ
ಲಿಂಗಾಂಗ ಸಾಮರಸ್ಯಾಖ್ಯಂ ಮನ್ನಿಷ್ಠಾಗೋಪಿತಂ ಪರಂ
ಭಕ್ತಿಸಿಕ್ತಂ ಮಮ ಜ್ಞಾನಂ ಮೋಕ್ಷಾಯ ಭವತಿ ಧ್ರುವಂ ॥"

— ಕಾರಣಾಗಮ

ದೀಕ್ಷಾಸಂಸ್ಕಾರವಿಲ್ಲದ ಸಂಸ್ಕೃತಿಯಿಲ್ಲದ ಜೀವಿಯ ಹೃದಯವು ಅಪವಿತ್ರವೂ ಆಕುಲವೂ ಆಗಿರುತ್ತದೆ. ಅಂತವನಿಗೆ ಉಪದೇಶಿಸಿದ ಜ್ಞಾನವು ಮರುಭೂಮಿಯಲ್ಲಿನ ಸಸ್ಯದಂತೆ ಬೆಳೆಯದು.

ಒಂದು ವೇಳೆ ಜ್ಞಾನ ಲಬ್ಧವಾದರೂ ಲಿಂಗನಿಷ್ಠೆಯಿಲ್ಲದಿರುವುದರಿಂದ ರಕ್ಷಣೆಯ ಪಡೆಯದ ಸಸ್ಯದಂತೆ ಫಲಿತಕ್ಕೆ ಬಾರದು.

ದೀಕ್ಷಾ ಸಂಸ್ಕೃತಿಯಿಂದ ಸಂಶುದ್ಧವಾದ ಚಿತ್ತದಲ್ಲಿ ಸಮರ್ಪಿತವಾದ ಲಿಂಗಾಂಗಸಾಮರಸ್ಯವೆಂಬ ಸಸ್ಯವು ಶಿವನಿಷ್ಠೆಯಿಂದ ರಕ್ಷಿತವಾಗಿ ಭಕ್ತಿರಸ (ಜಲ)ಸಿಕ್ತವಾಗಿ ಶಿವಜ್ಞಾನವನ್ನುಂಟುಮಾಡಿ ಮೋಕ್ಷಕ್ಕೆ ಕಾರಣವಾಗುತ್ತದೆ. ಮೋಕ್ಷವೆಂದರೆ ಶಿವಪ್ರಸಾದವು.

"ಮತ್ಪ್ರಸಾದೇನ ನ ವಿನಾ ಮುಕ್ತಿಃ ಸಂಸೃತಿ ಬಂಧನಾತ್
ಮಮಜ್ಞಾನೇನ ನ ವಿನಾ ಮತ್ಪ್ರಸಾದೋ ಭವಿಷ್ಯತಿ
ಮದ್‌ಜ್ಞಾನಂ ನ ಭವತ್ಯೇವ ಹ್ಯನಯಾ ದೀಕ್ಷಯಾ ವಿನಾ
ತಸ್ಮಾದಿಯಂ ಮಹಾದೀಕ್ಷಾ ಮೋಕ್ಷದಾ ನಿಶ್ಚಿತಾ ಖಲು ।
ತಸ್ಮಾದ್ದೀಕ್ಷಾಮಿಮಾಂ ಮುಕ್ತ್ವಾ ಮೋಕ್ಷಕಾಮಃ ಪಥಾಂತರೈಃ
ಗಚ್ಛನ್ನಮುಚ್ಯತೇ ಜಂತುಃ ಕಲ್ಪ ಕೋಟಿ ಶತೈರಪಿ
ತಸ್ಮಾದ ಸಂಶಯಂ ದೇವಿ ವ್ರತಮೇತದ್ವಿಮುಕ್ತಿದಂ ॥"

— ಕಾರಣಾಗಮ

ಶಿವಪ್ರಸಾದವಿಲ್ಲದೆ ಸಂಸಾರಬಂಧನದಿಂದ ಬಿಡುಗಡೆಯಾಗದು; ಶಿವಜ್ಞಾನವಿಲ್ಲದೆ ಶಿವಪ್ರಸಾದವುಂಟಾಗದು; ಸದ್ರೂಪ ಕ್ರಿಯಾದೀಕ್ಷೆಯಿಲ್ಲದೆ ಶಿವಜ್ಞಾನವೊದಗದು. ಅದರಿಂದ ಈ ಕ್ರಿಯಾ ಮಂತ್ರವೇಧಾತ್ಮಕ ಮಹಾದೀಕ್ಷೆಯು ಅನಿವಾರ್ಯವೂ ಮೋಕ್ಷಕಾರಿಯೂ ಆಗಿದೆ. ಇದುವೇ ನಿಶ್ಚಿತ. ಈ ಮಹಾದೀಕ್ಷೆಯಿಲ್ಲದೆ ಬೇರೆ ಮಾರ್ಗಗಳಿಂದ ಎಂದಿಗೂ ಮೋಕ್ಷವಾಗದು. ದೀಕ್ಷಾ ಕ್ರಿಯಾತ್ಮಕ ವ್ರತವೇ ಮುಕ್ತಿಕಾರಿ ಎಂಬಲ್ಲಿ ಯಾವ ಸಂಶಯವಿಲ್ಲ.

ಇದಕ್ಕೆ ಗಿರಿಜೆಯು ಮತ್ತೊಂದು ಕೇಳಿಕೆಯನ್ನು ಮುಂದಿಡುತ್ತಾಳೆ :

"ವಿದ್ಯೇತ ದೀಕ್ಷಿತಃ ಕಶ್ಚಿತ್ ಸಮ್ಯಗ್ ಜ್ಞಾನವಿವರ್ಜಿತಃ
ರಾಗದ್ವೇಷಾನುಬದ್ಧಶ್ಚ ತಸ್ಯ ಮುಕ್ತಿಃ ಕಥಂ ಭವೇತ್ ?।
ಯದಿ ತಸ್ಯಾಪಿ ಮುಕ್ತಿಃ ಸ್ಯಾತ್ ಜ್ಞಾನಾಪೇಕ್ಷಾ ನಿರರ್ಥಕಾ
ಚೇದ್ವಿಮುಕ್ತಿರ್ನ ತಸ್ಯ ಸಾದ್ವ್ರತಮೇತನ್ನ ಮೋಕ್ಷದಂ ॥"

ಕೇವಲ ದೀಕ್ಷೆಯಾದವನು ಸಮ್ಯಗ್ ಜ್ಞಾನವಿಲ್ಲದೆ ರಾಗದ್ವೇಷಗಳಿಂದ ಕೂಡಿದವನಾದರೆ ಆತನಿಗೆ ಮುಕ್ತಿ ಹೇಗೆ ಲಭಿಸುವುದು ? ಒಂದು ವೇಳೆ ಲಭಿಸುವುದೆಂದರೆ ಜ್ಞಾನದ ಅಪೇಕ್ಷೆಯು ನಿರರ್ಥಕವಾಗುತ್ತದೆ. ಮುಕ್ತಿ ಆಗು

ವುದಿಲ್ಲೆಂದರೆ ಕ್ರಿಯಾತ್ಮಕ ದೀಕ್ಷಾವ್ರತದಿಂದ ಮೋಕ್ಷವಾಗುವುದಿಲ್ಲೆಂಬುದು ಸಿದ್ಧವಾಗುತ್ತದೆ. ಇದಕ್ಕೇನಃ ಪರಿಹಾರ ?

"ನ ಜನ್ಮಯಾತನಾ ಜಂತೋರ್ನ ಚ ಸಂಯಮಯಾತನಂ
ಮದ್‌ಜ್ಞಾನ ವಿಮುಖಸ್ಯಾಪಿ ಶಾಂಭವವ್ರತಸೇವಿನಃ ।
ಮಹಾಪಾತಕಯುಕ್ತೋಽಪಿ ದೀಕ್ಷಿತಃ ಶುಚಿತಾಮಿಯಾತ್
ದೀಕ್ಷಿತಃ ಪಾತಕೀಚೇತ್ ಸ್ಯಾದ್ಗಚ್ಛೇದ್ ಭೈರವಯಾತನಾಂ ।
ಸ ತಥಾ ಭೈರವೀಮುಗ್ರಾಂ ಯಾತನಾಮನುಭೂಯ ಚ
ಮದನುಗ್ರಹಪಾತ್ರಃ ಸ್ಯಾನ್ನಪುನರ್ಜನ್ಮಭಾಗ್ಭವೇತ್ ।
ದೀಕ್ಷಿತೋಽದೀಕ್ಷಿತೋವಾಽಪಿ ಶೈವಾಚಾರ ವಿದೂಷಕಃ
ಭಕ್ತಾದಿನಿಂದಕಶ್ಚೇತ್ ಸ್ಯಾನ್ನರಕೀ ಕಾಲಮಕ್ಷಯಂ ॥'

ಶಿವಜ್ಞಾನ ವಿರಹಿತನಾಗಿದ್ದರೂ ಶಾಂಭವವ್ರತ ನಿರತನಾದವನು ಜನ್ಮಯಾತನೆಯನ್ನು ಬಂಧನ ಯಾತನೆಯನ್ನು ಹೊಂದನು.

ಮೊದಲು ಮಹಾಪಾತಕ ಮಾಡಿ ಬಳಿಕ ದೀಕ್ಷಿತನಾದರೆ ಆತನ ಪಾತಕ ಪರಿಹಾರವಾಗಿ ಪರಿಶುದ್ಧನಾಗುತ್ತಾನೆ. ಅದೇ ಮೊದಲು ದೀಕ್ಷಿತನಾಗಿ ಬಳಿಕ ಪಾತಕಿಯಾದರೆ ಭೈರವೀಯಾತನೆಯನ್ನು ಅನುಭವಿಸುತ್ತಾನೆ.

ಉಗ್ರವಾದ ಭೈರವೀಯಾತನೆಯನ್ನು ಅನುಭವಿಸಿದ ಬಳಿಕ ಮರಳಿ ಶಿವಾನುಗ್ರಹಕ್ಕೆ ಪಾತ್ರನಾದರೆ ಆತನಿಗೆ ಪುನರ್ಜನ್ಮವಿರದು, ಮುಕ್ತನಾಗುತ್ತಾನೆ.

ದೀಕ್ಷಿತನಾಗಲಿ ಅದೀಕ್ಷಿತನಾಗಲಿ ಶಿವಾಚಾರ ವಿದೂಷಕನೂ ಭಕ್ತಾದಿ ನಿಂದಕನೂ ಆಗಿದ್ದರೆ ಆತನಿಗೆ ನಿಡುಗಾಲ ನರಕ ತಪ್ಪದು. ಓ ಗಿರಿಜೆ, ಇದು ಕ್ರಿಯೆ ಜ್ಞಾನಗಳ ದೀಕ್ಷೆ ಅದೀಕ್ಷೆಗಳ ಮೀಮಾಂಸೆ. ಇದರಲ್ಲಿ ಇನ್ನು ನೀನು ಸಂಶಯವನ್ನು ತಾಳಬೇಡ:

ಓ ಮೀಢುಷ್ಟಮನೆ, ನಿಮಗೆ ನಮಸ್ಕಾರ. ನನ್ನ ತಪ್ಪನ್ನು ಕ್ಷಮಿಸಿರಿ. ನೀವು ಪ್ರಸನ್ನರಾದರೆ ಜಗತ್ತಿನಲ್ಲಿ ಯಾವುದೂ ದುರ್ಲಭವಾಗದು. ತಾವು ಹೇಳಿದ ಬಳಿಕ ನಾನು ಕೇಳುವ ವಿಷಯವೇ ಇರದು. ಶಿವಾಗಮಾದಿ ಶ್ರುತಿಯಲ್ಲಿರುವುದೆಲ್ಲವೂ ನಿಮ್ಮ ಸೂಕ್ತಿಯೆ ಆಗಿದೆ. ಆದರೂ ಕೇಳಿದ್ದೇನೆ, ಕೇಳುತ್ತಿ

ದ್ದೇನೆ ಲೋಕದವರ ಸಂಶಯ ನಿವೃತ್ತಿಗಾಗಿ ! ಇದೀಗ ಸಂದೇಹದಿಂದ ನಿವೃತ್ತಳಾದೆ. ವೃಷಭವಾಹನನೆ, ನನ್ನನ್ನು ಕ್ಷಮಿಸು.

ಓ ದೇವಿ, ನೀನು ಹಾಗೆ ಭಾವಿಸಬೇಡ; ಪ್ರಾರ್ಥೇಯಃ ಪಡಬೇಡ. ಇದರಲ್ಲಿ ನಿನ್ನ ಸ್ವಾರ್ಥಾಹಂಕಾರಗಳೇನಿಲ್ಲ. ಜನತೆಯ ಕ್ಷೇಮಕ್ಕಾಗಿ ಕೇಳುವುದರಲ್ಲಿ ಕಳಂಕವೇನಿಲ್ಲ. ಪ್ರತಿಯಾಗಿ ಮಹತ್ತರವಾದ ಗುಣವೇ ಇರುತ್ತದೆ. ಇನ್ನೂ ಏನಾದರಿದ್ದರೆ ಅಳುಕದೆ ಕೇಳು. ಗಿರಿನಂದಿನಿಯೆ ಹೇಳುವೆನು.

ಹಾಗಾದರೆ ಇನ್ನೊಂದು ನನ್ನ ಕೇಳಿಕೆಯಿದೆ; ಅದಿದು :

"ಸೇಯಂ ಹಿ ಶಾಂಭವೀ ದೀಕ್ಷಾ ಜ್ಞಾನನಿಷ್ಠಾ ವಿಧಾಯಿನೀ
ದೃಶ್ಯತೇ ಜ್ಞಾನನಿಷ್ಠಾ ಹಿ ಯತೇರೇವೋಚಿತಾ ಭವೇತ್ ।
ನಿತ್ಯ ನೈಮಿತ್ತಿಕ ಮುಖಕರ್ಮತತ್ಪರ ಚೇತಸಃ
ಕುಟುಂಬ ಭರಣ ವ್ಯಗ್ರಮನಸೋ ಗೃಹಮೇಧಿನಃ
ಜ್ಞಾನನಿಷ್ಠಾ ಕಥಂ ಸಾಧ್ಯಾ ಬ್ರೂಹಿ ಮೇ ಕರುಣಾನಿಧೇ ॥"

ಜ್ಞಾನನಿಷ್ಠೆಯನ್ನುಂಟುಮಾಡುವ ಈ ಶಾಂಭವೀ ದೀಕ್ಷೆಯು ಸಂನ್ಯಾಸಿಗಳಿಗೆ ಉಚಿತವಲ್ಲದೆ ಕುಟುಂಬರಕ್ಷಣೆಯಲ್ಲಿ ವ್ಯಗ್ರಮನಸ್ಸುಳ್ಳ ಸಂಸಾರಿಗಳಿಗೆ ಹೇಗೆ ಉಚಿತವಾಗುವುದು ? ಮತ್ತು ಹೇಗೆ ಸಾಧ್ಯವಾಗುವುದು ? ಅದರಲ್ಲಿಯೂ ನಿತ್ಯ ನೈಮಿತ್ತಿಕ ಪ್ರಧಾನ ಕರ್ಮಗಳಲ್ಲಿ ತತ್ಪರರಾದವರಿಗೆ ಅದು ಹೇಗೆ ಸಾಧ್ಯ ?

ಓ ಗಿರಿಜೆ, ಯತಿಯೇ ಮೋಕ್ಷಾಧಿಕಾರಿಯೆಂಬುದೇನಿಲ್ಲ; ಮಾನವರೆಲ್ಲರೂ ಮೋಕ್ಷಾಧಿಕಾರಿಗಳೆ ! ಕೇಳು :

"ಮೋಕ್ಷಾಯಾಧಿಕೃತೋ ಲೋಕೇ ಯತಿರೇವ ಕಥಂ ಭವೇತ್ ?
ಬ್ರಹ್ಮಚಾರೀ ಗೃಹಸ್ಥೋ ವಾ ವಾನಪ್ರಸ್ಥೋ ಯತಿಸ್ತು ವಾ
ಬ್ರಾಹ್ಮಣಃ ಕ್ಷತ್ರಿಯೋ ವಾಽಥ ವೈಶ್ಯಶ್ಶೂದ್ರೋಽಂತ್ಯಜೋಽಪಿ ವಾ
ಪುಮಾನ್‌ನಾರ್ಯಥವಾ ಕ್ಲೀಬಃ ಸರ್ವೇ ಮೋಕ್ಷಾಧಿಕಾರಿಣಃ ।
ಮದನುಗ್ರಹ ಪಾತ್ರೋ ಯಃ ಸರ್ವೋ ಮೋಕ್ಷಾಯ ಕಲ್ಪತೇ
ಮತ್ಪ್ರಸಾದ ವಿಹೀನಾಯ ವ್ರತಮೇತನ್ನ ರೋಚತೇ ॥"

ಬಂಧನದ ಬಿಡುಗಡೆಗೆ ಚತುರಾಶ್ರಮ ಭೇದವಾಗಲಿ, ಚತುರ್ವರ್ಣ ಭೇದವಾಗಲಿ, ಅಂತ್ಯಜ ಅಗ್ರಜ ಭೇದವಾಗಲಿ, ಗಂಡು–ಹೆಣ್ಣೆಂಬ ಭೇದವಾಗಲಿ ಕ್ಲೈಬ್ಯನೆಂದಾಗಲಿ ಯಾವ ಭೇದವಿರುವುದಿಲ್ಲ. ಎಲ್ಲರೂ ಮೋಕ್ಷಾಧಿಕಾರಿಗಳು. ಶಿವಾನುಗ್ರಹವು ಸರ್ವರಿಗೆ ಸಮವಾದುದು. ಶಿವಪ್ರಸಾದ ಮುಖ್ಯ. ಅದಿಲ್ಲದಾತನಿಗೆ ಮಾತ್ರ ಈ ವ್ರತ(ಕ್ರಿಯೆ) ರುಚಿಸದು.

ಅಂದಿನ ಆ ಮಹಾಪಾಶುಪತ ಧರ್ಮದಲ್ಲಿಯೇ ಮಾನವತಾವಾದವು ತಲೆಯೆತ್ತಿ ನಿಂತಿದೆ. ಸಮದರ್ಶನ ಸಮ್ಯಕ್‌ದೃಷ್ಟಿ ವಿಕಸಿತವಾಗಿದೆ. ಅನಾದಿ ವೀರಶೈವ ಈ ಉತ್ಕ್ರಾಂತಿಯನ್ನು ಇಂದಿನವರು ಮನನಿಸಿ ಗಮನಿಸಬೇಕು.

ಶಾಂಭವವ್ರತ ಅಂದರೆ ತ್ರಿವಿಧ ದೀಕ್ಷಾಸಂಸ್ಕಾರ ಸಾತಿಶಯ ಶಕ್ತಿಸಂಪನ್ನವಾದುದು. ಅದರಲ್ಲಿ ಕ್ರಿಯೆ ಜ್ಞಾನಾನುಭವಗಳೆಲ್ಲವೂ ಇರುತ್ತವೆ. ಅದಕ್ಕೆ ಮತ್ತೆ ಪ್ರತ್ಯೇಕವಾಗಿ ಜ್ಞಾನದ ಅವಶ್ಯಕತೆಯಿರದು.

"ಜ್ಞಾನೇನ ನ ವಿನಾ ಮೋಕ್ಷಃ ಸಿಧ್ಯೇತ್ಕೇನಾಪಿ ಸುವ್ರತೇ
ಜ್ಞಾನಂ ಚ ನ ವಿನಾಽನೇನ ಶಾಂಭವೇನ ವ್ರತೇನ ತು ।"

ಯಾವನಾದರು ಜ್ಞಾನವಿಲ್ಲದೆ ಮೋಕ್ಷವನ್ನು ಪಡೆದಿದ್ದರೆ, ಅದು ಈ ಶಾಂಭವವ್ರತದ ಪ್ರಭಾವದಿಂದಲೆ !

"ವೈದಿಕಂ ತಾಂತ್ರಿಕಂ ಚೇತಿ ವ್ರತಮೇತದ್ದ್ವಿಧಾ ಭವೇತ್
ದ್ವಿಜಾನಾಂ ವೈದಿಕಂ ಪ್ರೋಕ್ತಮನ್ಯೇಷಾಂ ತಾಂತ್ರಿಕಂ ಸ್ಮೃತಂ ।
ನಿತ್ಯಂ ನೈಮಿತ್ತಿಕಂ ವಾಽಪಿ ಕ್ರಿಯತೇ ಗೃಹಮೇಧಿನಾ
ಮದಾರಾಧನ ಬುದ್ಧ್ಯಾ ಯತ್ಕರ್ಮ ತದ್ ಜ್ಞಾನಸಾಧನಂ ।
ಗುರು ಜಂಗಮ ಲಿಂಗಾರ್ಚಾಸಾಧನಂ ಯದ್ಭವೇದ್ಭುವಿ
ಕುಟುಂಬಕೇ ವಿನಿರ್ದಿಷ್ಟಂ ಪರಮಂ ಮೋಕ್ಷಸಾಧನಂ ।
ತತ್ಕರ್ಮ ಚ ಕುಟುಂಬಂ ವಾ ನ ಮುಕ್ತಿಪಥರೋಧಕಂ
ಲಿಂಗನಿಷ್ಠಾಗರಿಷ್ಠಸ್ಯ ವಿದುಷೋ ಗೃಹಮೇಧಿನಃ ।
ಮದ್ಭಕ್ತಗಣ ಸಂಸೇವಾನಿರ್ಭರಾನಂದ ವೈಭವಂ
ಗೃಹಮೇಧೀವ ಸಂಪ್ರಾಪ್ತಂ ಕಥಂ ಪಾತ್ರೀ ಭವೇದ್ಯತಿಃ ?॥"

ದೀಕ್ಷಾವ್ರತವು ವೈದಿಕ ತಾಂತ್ರಿಕ ಎಂದು ಎರಡು ಬಗೆ! ದ್ವಿಜರಿಗೆ ಮಾತ್ರ ವೈದಿಕ ದೀಕ್ಷೆ! ಉಳಿದೆಲ್ಲರಿಗೆ ತಾಂತ್ರಿಕ ದೀಕ್ಷೆ. ಗೃಹಸ್ಥನು ನಿತ್ಯ ವನ್ನಾಗಲಿ ನೈಮಿತ್ತಿಕವನ್ನಾಗಲಿ ಶಿವಾರಾಧನ ಬುದ್ಧಿಯಿಂದ ಮಾಡಿದಲ್ಲಿ ಅದು ಜ್ಞಾನಸಾಧನವಾಗುತ್ತದೆ. ಲೋಕದಲ್ಲಿ ಗುರುಲಿಂಗಜಂಗಮಾರ್ಚನೆಗೆಂದು ಕುಟುಂಬದಲ್ಲಿ ನಿರ್ದಿಷ್ಟ ಸಾಧನವು ಪರಮ ಮೋಕ್ಷಕ್ಕೆ ಕಾರಣವಾಗುತ್ತದೆ. ಆ ಕುಟುಂಬವಾಗಲಿ ಆ ಕ್ರಿಯೆಯಾಗಲಿ ಮುಕ್ತಿಪಥಕ್ಕೆ ಅಡ್ಡಿಯಾಗಲಾರದು. ಮತ್ತು ಲಿಂಗನಿಷ್ಠಾಗರಿಷ್ಠನೂ ಜ್ಞಾನಿಯೂ ಆದ ಗೃಹಸ್ಥನಿಗೆ ಮುಕ್ತಿಯಾಗು ತ್ತದೆ. ಶಿವಭಕ್ತಗಣರ ಸೇವೆಯಿಂದಾದ ಗಾಢಾನಂದ ವೈಭವವುಳ್ಳ ಗೃಹಸ್ಥ ನಂತೆ ಯತಿಯೂ ಪಡೆಯಲು ಪಾತ್ರನಾಗನು.

"ವಿರಕ್ತಶ್ಚೇದ್ಯತಿರ್ಭೂಯಾದವಿರಕ್ತೋ ಗೃಹೀ ಭವೇತ್
ಯತಿಸ್ಸನ್ನವಿರಕ್ತಶ್ಚೇನ್ನರಕೀ ಕಾಲಮಕ್ಷಯಂ ।
ಪುತ್ರದಾರಾನುಷಕ್ತಸ್ಸನ್ನ ವಿರಕ್ತಶ್ಚರನ್ನಪಿ
ಮನ್ನಿಷ್ಠಾಯುಕ್ತ ಚಿತ್ತಶ್ಚೇದ್ಗೃಹೀ ಮುಕ್ತೋ ಭವೇದ್ಧ್ರುವಂ ।"

ಶಾಂಭವ ವ್ರತಾತ್ಮಕ ದೀಕ್ಷಾ ಸಂಸ್ಕಾರವಿಲ್ಲದ ವಿರಕ್ತನಾಗಲಿ ಯತಿ ಯಾಗಲಿ ಅವಿರಕ್ತನಾಗಲಿ ಗೃಹಿಯಾಗಲಿ ಸಂನ್ಯಾಸಿಯಾಗಲಿ ಯಾರೇ ಆಗಲಿ ನಿಡುಗಾಲ ನರಕಿಯಾಗುತ್ತಾನೆ.

ಮಡದಿ ಮಕ್ಕಳಿಂದೊಡಗೂಡಿರಲಿ ಕೂಡದಿರಲಿ ಶಿವ ನಿಷ್ಠಾ ಚಿತ್ತವುಳ್ಳ ಗೃಹಸ್ಥನು ನಿಶ್ಚಯವಾಗಿ ಮುಕ್ತನಾಗುತ್ತಾನೆ. ಶಾಂಭವ ವ್ರತ ಪೂರ್ವಕವಾದ ಜ್ಞಾನನಿಷ್ಠೆಯುಳ್ಳವನು ಗೃಹಸ್ಥನಾದರೂ ಭವಬಂಧದಿಂದ ಬಿಡುಗಡೆಯನ್ನು ಹೊಂದುತ್ತಾನೆ – ಲೋಕದಲ್ಲಿ!

**ಸಾಂಸ್ಕಾರಿಕ ಸ್ತ್ರೀ ಸಾಮ್ಯಕ್ರಾಂತಿ :**

ಈ ಕ್ರಾಂತಿಯು ಅನಾದಿ ವೀರಶೈವವಾದ ಮಹಾಪಾಶುಪತ ಮತದ ಕೊಡುಗೆ! ಶಾಂಭವೀದೀಕ್ಷೆಯನ್ನು ಸ್ತ್ರೀಯರಿಗೂ ಕೊಡುವ ಪದ್ಧತಿಯು ಅಂದೇ ಇದ್ದಿತು. ಆತ್ಮೋದ್ಧಾರಕ್ಕಾಗಿ ಆರಾಧಿಸುವ ಹಕ್ಕು ಅನಾದಿ ವೀರ

ಶೈವರ ಹೆಣ್ಣುಮಕ್ಕಳಲ್ಲಿದ್ದಿತು. ಅಂತೆಯೇ ಶಿವೆಯು ಈ ಪ್ರಶ್ನೆಗಳನ್ನು ಹಾಕಿದ್ದಾಳೆ.

೧) ಸ್ತ್ರೀಯರಿಗೆ ಶಿವದೀಕ್ಷೆಯನ್ನು ಮದುವೆಗೆ ಮೊದಲು ಮಾಡಬೇಕೋ ಮದುವೆಯಾದಬಳಿಕ ಮಾಡಬೇಕೊ ?

೨) ಗಂಡನು ಮಾಡಬೇಕೋ, ಗುರು ಮಾಡಬೇಕೊ ?

೩) ಇನ್ನೊಬ್ಬರಿಂದ ದೀಕ್ಷೆಯಾದರೆ ಸ್ತ್ರೀಯರಿಗೆ ಅನ್ಯಶೇಷತ್ವ ಉಚಿತವಾಗಬಲ್ಲುದೆ ?

೪) ಗೃಹಕೃತ್ಯದಲ್ಲಿ ನಿರತರಾದ ಸ್ತ್ರೀಯರಿಗೆ ಜ್ಞಾನಾರ್ಜನೆಗೆ ಅವಕಾಶ ಸಿಕ್ಕಬಲ್ಲುದೆ ?

೫) ಲಿಂಗನಿಷ್ಠಪರರಾದ ಅಂಗನೆಯರಿಗೆ ಪತಿಶುಶ್ರೂಷೆ–ಪುತ್ರಪಾಲನಾದಿಗಳು ಹೇಗೆ ಸಂಭವಿಸಬಲ್ಲವು ?

೬) ಸತಿಗೆ ಪತಿಯೆ ದೈವ. ಪತಿದೇವನನ್ನು ಬಿಟ್ಟು ಅನ್ಯದೇವ ಸೇವೆಯಲ್ಲಿರುವುದು ಸ್ತ್ರೀಯರಿಗೆ ಸಮುಚಿತವೆ ?

ಇವುಗಳಿಗೆ ಪರಿವಿಡಿದು ಮಾರ್ನುಡಿಗಳು ಹೀಗಿವೆ :

೧) "ವ್ರತಮಾವಶ್ಯಕಮಿದಂ ಕಥ್ಯತೇ ಯೋಷಿತಾಮಪಿ
ಅನುಷ್ಠೇಯಂ ಪರಸ್ತಾದ್ವೈ ನಿಯತಂ ಪಾಣಿ ಪೀಡನಾತ್ ।"

ಸ್ತ್ರೀಯರಿಗೂ ಶಿವದೀಕ್ಷಾವ್ರತ ಆವಶ್ಯಕ; ಅನುಷ್ಠೇಯ; ವಿವಾಹಾನಂತರ ಶಿವದೀಕ್ಷೆಯನ್ನು ಮಾಡಬೇಕು.

೨) "ಬ್ರಾಹ್ಮಣೀನಾಂ ಹಿ ದೀಕ್ಷಾಯಾ ಗ್ರಹಣಂ ಭರ್ತೃತೋ ವರಂ
ಭರ್ತ್ರರ್ಯಶಕ್ತೇ ಗ್ರಹಣಮನ್ಯತೋ ವಾ ವಿಶಿಷ್ಯತೇ ।"

ಹೆಣ್ಣುಮಕ್ಕಳಿಗೆ ದೀಕ್ಷೆಯನ್ನು ಗಂಡಂದಿರಿಂದ ಮಾಡಿಸುವುದು ಮೇಲು. ಒಂದು ವೇಳೆ ಗಂಡಂದಿರು ಅಸಮರ್ಥರಿದ್ದರೆ ಗುರುಗಳಿಂದಲಾದರೂ ಮಾಡಿಸಬೇಕು. ಇದೂ ವಿಶೇಷವಾಗಿಯೆ ಇರುತ್ತದೆ. ಪತಿ ಪತ್ನಿಯರಿಗೆ ಒಬ್ಬ ಗುರುವಿರುವುದು ಚನ್ನ. ಬೇರೆಬೇರೆಯಿದ್ದರೆ ಪತಿಯ ಗುರುವಿನಲ್ಲಿ ಪತ್ನಿಗೆ,

ಪತ್ನಿಯು ಗುರುವಿನಲ್ಲಿ ಪತಿಗೆ ಗುರುದೃಷ್ಟಿಯಿರಬೇಕು; ಭಕ್ತಿಯಿರಬೇಕು. ಇಲ್ಲವಾದರೆ ಪತಿತರಾಗಬೇಕಾಗುತ್ತದೆ.

೩) ದೀಕ್ಷಾ ಗುರುವಿನಿಂದ ಶೇಷಪ್ರಸಾದವನ್ನು ಸ್ವೀಕರಿಸಿದರೆ ಅದು ಅನ್ಯಶೇಷವೆನಿಸದು. ಅದು ದೈಹಿಕ ಸಂಬಂಧದ್ದಲ್ಲ; ಆತ್ಮಸಂಬಂಧದ್ದು. ಸಾಂಸ್ಕಾರಿಕ ಆತ್ಮ ಅನ್ಯವಲ್ಲ. ಗುರೂಪದೇಶವನ್ನು ಪಡೆದ ಮೇಲೆ ಬೇರೆ ಶೇಷವನ್ನು ಆಶಿಸಬಾರದು.

ಗಂಡ ಗುರುವಾದರೆ ಆತನಲ್ಲಿ ತಂದೆತನ ಗೌಣವಾಗಿರುತ್ತದೆಯಲ್ಲದೆ ಮುಖ್ಯವಾಗಿರದು; ದೋಷವಾಗದು. ತಾಯಿ ತಂದೆ ದೇವತ್ವಗಳು ಉಪಚರಿತವಾಗುತ್ತವೆ. ಅಷ್ಟು ಮಾತ್ರದಿಂದ ಗಂಡ ಹೆಂಡರ ಸಂಬಂಧಕ್ಕೆ ಬಾಧೆ ಬಾರದು. ಹೇಗೆ ಆಚಾರ್ಯನಲ್ಲಿ ತಂದೆಯಲ್ಲಿ ದೇವತಾಬುದ್ಧಿಯಿರುತ್ತದೆಯೋ ಹಾಗೆ ಪತಿಯಲ್ಲಿ ದೇವತ್ವ ಬುದ್ಧಿಯಿರಬೇಕು. ದೇವತ್ವ ನಿಷೇಧವಿರದು. ಪತಿ ಪತ್ನಿಭಾವವು ಅಥವಾ ಸಂಬಂಧವು ಕಲ್ಪಿತವಲ್ಲದೆ ನಿತ್ಯವಲ್ಲ. ನರ ನಾರಿ ಎಂಬವು ಇಹದ ಜನ್ಮಕ್ಕೆ ಮಾತ್ರ ಸಂಬಂಧಿಸಿದವು. ವಾಸ್ತವವಾಗಿ ಪಾರಮಾರ್ಥಿಕವಾಗಿ ಆತ್ಮನು ಹೆಣ್ಣಲ್ಲ, ಗಂಡಲ್ಲ, ನಪುಂಸಕನಲ್ಲ. ಇವೆಲ್ಲ ಆ ಆ ಶರೀರ ಸಂಬಂಧದಿಂದ ಬರುತ್ತವೆ. ಸ್ತ್ರೀತ್ವ ಐಹಿಕ, ಪತ್ನಿತ್ವ ಕಲ್ಪಿತ, ಮೋಕ್ಷಗಾಮಿಗಳಿಗೆ ಇವು ಅಡ್ಡಿಯಾಗವು. ದೇವೋಪಾಸನೆ ಎಲ್ಲರಿಗೂ ಅಗತ್ಯ. ಈ ಸಂಸಾರಾರಣ್ಯದಲ್ಲಿ ಬಿದ್ದು, ದುಃಖಾಂಬುಧಿಯಲ್ಲಿ ಮುಳುಗುವವರಿಗೆಲ್ಲರಿಗೂ ಅಂದರೆ ಸ್ತ್ರೀ ಪುರುಷರಿಗೂ ಶಿವದೀಕ್ಷಾ ಉಪದೇಶ ಅಗತ್ಯ.

"ಅದೀಕ್ಷಾಽಸಂಸ್ಕೃತಾ ನಾರೀ ದೀಕ್ಷಿತಸ್ಯ ನಿಜೇಶಿತುಃ
ನ ಯೋಗ್ಯಾ ಪರಿಚರ್ಯಾಯೈ ದೀಕ್ಷಣೀಯಾ ಸತೀ ತತಃ ।
ಅದೀಕ್ಷಾಽಸಂಸ್ಕೃತಾ ನಾರೀ ಯಂ ಯಂ ಪಾಕಂ ಕರೋತಿ ಚ
ಸ ಸ ನೈವಾರ್ಹತಿ ಕಿಲ ಪಾಕೋ ಮಹ್ಯಂ ನಿವೇದಿತುಂ ।
ಅದೀಕ್ಷಾಽಸಂಸ್ಕೃತಾ ನಾರೀ ಪರಿಸ್ಪೃಶತಿ ಯಜ್ಜಲಂ
ಅಭಿಷೇಕಕ್ರಿಯಾದೀನಾಂ ಮಮ ನಾರ್ಹತಿ ತಜ್ಜಲಂ ।
ಪಾರತಂತ್ರ್ಯಂ ಹಿ ನಾರೀಣಾಮುಕ್ತಂ ಸ್ವರ್ಗ್ಯೇಷು ಕರ್ಮಸು

ಐಹಿಕೇಷ್ವಪಿ ಮೋಕ್ಷಾರ್ಥೇ ನ ಸ್ವಾತಂತ್ರ್ಯಂ ವಿಹನ್ಯತೇ ।
ತಸ್ಮಾದವಶ್ಯಂ ನಾರೀಣಾಂ ದೀಕ್ಷಾ ದೇಯಾ ಬುಧೋತ್ತಮೈಃ ॥"

ದೀಕ್ಷಾ ಸಂಸ್ಕಾರವಿಲ್ಲದ ಹೆಂಡತಿ ದೀಕ್ಷಾ ಸಂಸ್ಕಾರವುಳ್ಳ ಗಂಡನ ಸೇವೆಗೆ ಯೋಗ್ಯಳಲ್ಲ. ಕಾರಣ ಹೆಂಡತಿಯೂ ದೀಕ್ಷಿತಳಾಗಬೇಕು.

ದೀಕ್ಷಾ ಸಂಸ್ಕಾರವಿಲ್ಲದವಳು ಮಾಡಿದ ಅಡುಗೆ ಲಿಂಗ ನೈವೇದ್ಯಕ್ಕೆ ಸಲ್ಲದು.

ದೀಕ್ಷಾ ಸಂಸ್ಕಾರವಿಲ್ಲದ ಹೆಂಡತಿ ಮುಟ್ಟಿದ ನೀರು ಲಿಂಗಾಭಿಷೇಕಕ್ಕೆ ಬಾರದು.

ಹೆಂಗಸರಿಗೆ ಸ್ವರ್ಗೀಯ ಕರ್ಮಗಳಲ್ಲಿ ಪಾರತಂತ್ರ್ಯ ಉಕ್ತವಾಗಿದೆಯಲ್ಲದೆ, ಭವದ ಬಂಧನವನ್ನು ಬಿಡುಗಡೆ ಮಾಡಿಕೊಳ್ಳವಲ್ಲಿ ಸ್ವಾತಂತ್ರ್ಯವಿದ್ದೇ ಇರುತ್ತದೆ. ಈ ಹಕ್ಕನ್ನು ಕಳೆಯಲು ಸಾಧ್ಯವಿಲ್ಲ. ಅದರಿಂದ ಅವಶ್ಯವಾಗಿ ಹೆಣ್ಣು ಮಕ್ಕಳಿಗೆ ತಿಳಿದವರು ದೀಕ್ಷಾ ಸಂಸ್ಕಾರವನ್ನು ಕೊಟ್ಟಾಗಬೇಕು.

೪-೫) "ಲಿಂಗನಿಷ್ಠಾಽ ವಿರೋಧೇನ ಸ್ವಕೃತ್ಯಾನ್ಯನುಪಾಲಯೇತ್
ನ ದುಷ್ಯತೇ ತತೋ ನಾರೀ ಭರ್ತೃಶುಶ್ರೂಷಣಾದಿಷು ।
ಪತಿಂ ಪರಿಚರಂತೀ ಚ ಶ್ವಶ್ರ್ವಾದೀನ್ ಮೋಕ್ಷಯಂತ್ಯಪಿ
ಪಾಲಯಂತ್ಯಪಿ ಪುತ್ರಾದೀನ್ ಲಿಂಗನಿಷ್ಠಾಂ ನ ವಿಸ್ಮರೇತ್ ।
ಯಥೈವ ಬಾಲಾಪತ್ಯಾಯಾಃ ಕರ್ವಂತ್ಯಾ ಭವನಕ್ರಿಯಾಃ
ಬಾಲಾಯತ್ತಂ ಯಥಾ ಚಿತ್ತಂ ದೀಕ್ಷಿತಾಯಾಸ್ತಥೋಚಿತಂ
ತತೋ ನ ಗೃಹಕೃತ್ಯಾನಿ ಬಾಧಂತೇ ಮದುಪಾಸನಂ ॥"

ಲಿಂಗನಿಷ್ಠೆಯನ್ನು ಬಿಡದೆ ಲಿಂಗನಿಷ್ಠೆಗೆ ಅನುಗುಣವಾಗಿ ಯಾವ ಕೆಲಸವನ್ನೆ ಮಾಡಲಿ ಅದು ತಪ್ಪಲ್ಲ. ಪತಿ ಶುಶ್ರೂಷಾದಿಗಳೂ ತಪ್ಪಲ್ಲ. ಮನೆಗೆಲಸ ಮಾಡಲಿ, ಗಂಡನೆ ಮೊದಲಾದ ಬಳಗದ ಸೇವೆಯನ್ನು ಮಾಡಲಿ ಮಕ್ಕಳನ್ನು ಪೋಷಿಸಲಿ–ಜೊತೆಗೆ ಲಿಂಗನಿಷ್ಠೆಯಿರಲಿ. ಲಿಂಗನಿಷ್ಠೆಯನ್ನು ಬಿಡದಿರಲಿ. ತಾಯಿಯಾದವಳು ಮನೆಗೆಲಸ ಮಾಡುತ್ತ ಮಕ್ಕಳನ್ನು ಪೋಷಿಸುವಂತೆ ಲಿಂಗನಿಷ್ಠೆಯನ್ನು ನಡೆಸಲಿ. ಲಿಂಗೋಪಾಸನೆಯು ಗೃಹಕೃತ್ಯಗಳಿಗೆ ಅಡ್ಡಿ ಆತಂಕ

ಗಳಾಗವು. ಲಿಂಗೋಪಾಸನೆಯನ್ನು ಬಾಧಿಸವು. ಅಂತೆಯೇ ಜ್ಞಾನಾರ್ಜನೆಯನ್ನು ಬಾಧಿಸವು.

೬) "ಲಿಂಗನಿಷ್ಠಾ ಪರಾ ಭೂತ್ವಾ ಮನ್ನಿಷ್ಠಾಯುಕ್ತಚೇತಸಃ
ಪತ್ಯುಸ್ಸಂಸೇವನಾದ್ಭರ್ತ್ರಾ ಮತ್ಸಾಯುಜ್ಯಂ ಗಮಿಷ್ಯತಿ ।"

ಲಿಂಗನಿಷ್ಠೆ ಪತಿನಿಷ್ಠೆಗೆ ಭಂಗಕಾರಿಯಲ್ಲ. ಲಿಂಗ ಸತಿಪತಿಗಳಿಬ್ಬರಲ್ಲಿಯೂ ಇರುವ ಚೈತನ್ಯ, ಭಿನ್ನವಲ್ಲ. ಅನ್ಯದೇವ ಎಂದು ಕಲ್ಪಿಸಬಾರದು. ಪತಿಸೇವೆ ನಿರತಳಾಗಿ ಲಿಂಗನಿಷ್ಠೆಯಲ್ಲಿರುವ ಸತಿ ಶಿವಸಾಯುಜ್ಯವನ್ನು ಪಡೆಯುತ್ತಾಳೆ.

"ರಜಃ ಪ್ರಭವದುಷ್ಟಾಯಾಃ ಪ್ರಸವಾಶೌಚ ಸಂಗತೇಃ
ಲಿಂಗಸ್ಪರ್ಶನ ಪೂಜಾದ್ಯಾಃ ಕರಣೀಯಾಃ ಕಥಂ ಪ್ರಭೋ ।"

ಭವಾನಿಯ ಬಿನ್ನಪವಿದು : ಓ ಪ್ರಭೋ, ಹೆಣ್ಣು ಮುಟ್ಟಾದಾಗ ಲಿಂಗವನ್ನು ಮುಟ್ಟಬಹುದೆ ? ಹಡೆದಾಗ ಲಿಂಗಪೂಜೆಯನ್ನು ಮಾಡಬಹುದೆ ? ಹೇಗೆ ?

"ದೀಕ್ಷಾ–ಪವಿತ್ರಿತಾಂಗತ್ವಾತ್ ಲಿಂಗಸ್ಪರ್ಶೋ ನ ದೂಷ್ಯತೇ
ರಜೋವತ್ಯಾದಿಕಾಲೇಷು ಕಾರ್ಯಾ ಪೂಜಾ ಪ್ರಯತ್ನತಃ
ಪ್ರಸವ ಪ್ರಮುಖಾಪತ್ಸು ಪೂಜಾಭಂಗೋ ನ ದೋಷದಃ ।"

ಭವಹರನ ಉತ್ತರವಿದು. ಗುರುದೀಕ್ಷೆಯಿಂದ ಪವಿತ್ರಾಂಗವಾಗಿರುವುದರಿಂದ ಲಿಂಗವನ್ನು ಮುಟ್ಟಿದಲ್ಲಿ ದೋಷವುಂಟಾಗದು. ರಜಸ್ವಲೆಯಾದಾಗ ಲಿಂಗಪೂಜೆಯನ್ನು ತಪ್ಪದೆ ಸಾಧಿಸಿ ಮಾಡಬೇಕು. ಹೆರಿಗೆಯ ಸಮಯದಲ್ಲಿ ಒಂದು ವೇಳೆ ಪೂಜೆಗೆ ಭಂಗವಾದರೆ ದೋಷವುಂಟಾಗದು.

ದೀಕ್ಷೆ ದ್ವಿವಿಧ; ವೈದಿಕ, ತಾಂತ್ರಿಕ ಎಂದು. ವೈದಿಕ ದೀಕ್ಷೆ ಪರತಂತ್ರ. ತಾಂತ್ರಿಕ ದೀಕ್ಷೆಯಲ್ಲಿ ಸ್ವತಂತ್ರತೆಯಿದೆ; ಸ್ವಾಧಿಕಾರವಿದೆ. ಆಗಮಿಕ ಮಂತ್ರಗಳಿಗೆ ಕ್ರಿಯಾವಿಧಾನಗಳಿಗೆ ಹೆಣ್ಣು ಗಂಡೆಂಬ ಕವಲಿಲ್ಲ; ಸೂತಕಾದಿ ದೋಷವಿಲ್ಲ. ದೀಕ್ಷಾ ದೀಪ್ತಿಯ ಮುಂದೆ ಸೂತಕಾದಿ ಇರುಳು ಇರದು.

— ೩ —

"ಬ್ರಾಹ್ಮೇ ಮುಹೂರ್ತೇ ಮದ್ಭಕ್ತೋ ಬುಧ್ಯಮಾನೋನಗಾತ್ಮಜೇ
ನೇತ್ರಯೋಃ ಸ್ಪರ್ಶಯನ್ನಿಷ್ಟಲಿಂಗಂ ಮಾಮನುಸಂಸ್ಮರೇತ್ ।"

ಶಿವೆಯ ಕೇಳಿಕೆಯಂತೆ ಶಿವನು ಅನಾದಿ ವೀರಶೈವವಾದ ಮಹಾಪಶುಪತ ಮತದ ದೈನಂದಿನ ವಿಧಾನವನ್ನು ನಿರೂಪಿಸಿದ್ದಾನೆ.

ಓ ಗಿರಿಜೆ, ಶಿವಭಕ್ತನು ನಿತ್ಯ ಬ್ರಾಹ್ಮೀ ಮುಹೂರ್ತದಲ್ಲಿ ಎದ್ದೇಳಬೇಕು. ಎದ್ದು ತನ್ನ ಇಷ್ಟಲಿಂಗವನ್ನು ದೃಷ್ಟಿಸಬೇಕು; ಮುಟ್ಟಬೇಕು; ಶಿವನನ್ನು ಸಂಸ್ಮರಿಸಬೇಕು. ಗುರೂಪದೇಶದ ಮಾರ್ಗದಲ್ಲಿ ಹೃದಯದಲ್ಲಿ ಅರೂಪನೂ ದಿವ್ಯ ಸ್ವರೂಪನೂ ಆದ ಪರಶಿವನನ್ನು ಅನನ್ಯ ಮನಸ್ಸಿನಿಂದ ಧ್ಯಾನಿಸಬೇಕು. ಜೊತೆಗೆ ನಿತ್ಯ ಮಾಡತಕ್ಕ ಧರ್ಮಗಳನ್ನು ಅರ್ಥಗಳನ್ನು ದೈನಂದಿನ ಕೃತ್ಯವನ್ನು ಚಿಂತಿಸಬೇಕು. ಸಂಧ್ಯಾ ಸಮಯದಲ್ಲಿ ಊಟವನ್ನು ಕೂಟವನ್ನು ನಿದ್ದೆಯನ್ನು ಚಟವನ್ನು ಈ ನಾಲ್ಕನ್ನು ಮಾಡಬಾರದು. ಮುಂಜಾವಿನಲ್ಲಿ ಮುಚ್ಚಂಜೆಯಲ್ಲಿ ಅಪ್ಪಿತಪ್ಪಿ ಮಲಗಿದ್ದಾದರೆ ಇದಕ್ಕಾಗಿ ಪ್ರಾಣಾಯಾಮ ಮಾಡಿ ಮೂಲ ಮಂತ್ರವನ್ನು ನೂರೆಂಟುಸಲ ಜಪಿಸಬೇಕು. ಇದುವೆ ಅದಕ್ಕೆ ತಕ್ಕ ಪ್ರಾಯಶ್ಚಿತ್ತ ! ಮುಂಜಾವಿನಲ್ಲಿ ಎದ್ದೊಡನೆ ಶಿವಭಕ್ತನನ್ನು, ಭಸ್ಮವನ್ನು, ರುದ್ರಾಕ್ಷವನ್ನು, ಬಿಲ್ವಮರವನ್ನು ಶಿವನನ್ನು ಕಂಡರೆ ಅಭೀಷ್ಟವು ಅಳವಡುತ್ತದೆ. ಅದೇ ಪಾಷಂಡಿಯನ್ನು ಭವಿಯನ್ನು ವ್ರಾತ್ಯನನ್ನು ಯಾಚಕನನ್ನು ದೇವನಿಂದಕನನ್ನು ಕಂಡರೆ ಅನಿಷ್ಟವುಂಟಾಗುತ್ತದೆ.

ನೀರ್ತುಂಬಿದ ತಂಬಿಗೆಯನ್ನು ತೆಗೆದುಕೊಂಡು ಊರ ಹೊರಕ್ಕೆ ಹೋಗಬೇಕು. ತಂಬಿಗೆಯನ್ನು ಕೊಂಚ ದೂರದಲ್ಲಿರಿಸಬೇಕು. ಆಗ್ನೇಯ ದಿಕ್ಕಿಗೆ ಮುಖ ಮಾಡಬೇಕು. ಶಿವಸೂತ್ರವನ್ನು ಶಿರದ ಮೇಲಿರಿಸಿರಬೇಕು. ಮೇಲಕ್ಕೆ ಕೆಳಕ್ಕೆ ನೋಡದಂತಿರಬೇಕು. ಚಂದ್ರ ಸೂರ್ಯಾಗ್ನಿಗಳಿಗೆ ಅಭಿಮುಖನಾಗಿರಬೇಕು. ಸಮಾಹಿತ ಚಿತ್ತನಾಗಿರಬೇಕು. ಶೌಚವನ್ನು ತೀರಿಸಿಕೊಂಡು ಮನೆಗೆ ಮರಳಿದ ಬಳಿಕ ಮಣ್ಣು ನೀರುಗಳಿಂದ ಹಸ್ತ ಪಾದಾದಿಗಳನ್ನು ತೊಳೆಯಬೇಕು. ಇಲ್ಲವಾದರೆ ಮುಂದೆ ಮಾಡುವ ಕ್ರಿಯೆಗಳು ನಿಷ್ಫಲಗಳಾಗುತ್ತವೆ.

ಅಪವಿತ್ರನಾಗಿರಲಿ ಪವಿತ್ರನಾಗಿರಲಿ ಎಲ್ಲ ಅವಸ್ಥೆಗಳಲ್ಲಿಯೂ ಶಿವಲಿಂಗವನ್ನು ಸ್ಮರಿಸಬೇಕು. ಅಂತರಂಗ ಬಹಿರಂಗಗಳು ಶುಚಿಯಾಗುತ್ತವೆ. ವಿಧಿವತ್ತಾಗಿ ಹಸ್ತ ಪಾದಗಳನ್ನು ಶುಚಿಗೊಳಿಸಿದ ಬಳಿಕ ಬಾಯ್ ಮುಕ್ಕುಳಿಸ

ಬೇಕು. ದಂತಧಾವನ ಮಾಡಬೇಕು. ಹಲ್ಲುಕಡ್ಡಿಯನ್ನು ಅಭಿಮಂತ್ರಿಸ ಬೇಕು. ಇದರಿಂದ ಆಯುಷ್ಯ ಬಲ ಯಶಸ್ಸು ವರ್ಚಸ್ಸು ಜನಪ್ರಿಯತೆ ಧನಕನ ಕಾದಿಗಳು ಬ್ರಹ್ಮಪ್ರಜ್ಞೆ ಮುಂತಾದವುಗಳು ಲಭಿಸುತ್ತವೆ. ಲಭಿಸುವಂತೆ ಪ್ರಾರ್ಥಿಸಬೇಕು. ಪ್ರಾರ್ಥಿಸಿ ಹಲ್ಲುಜ್ಜಬೇಕು. ಮುಳ್ಳುಳ್ಳ ಹಾಲುಳ್ಳ ಕಡ್ಡಿ ಗಳಿಂದಾಗಲಿ ಬಿಲ್ವ ಕಡ್ಡಿಯಿಂದಾಗಲಿ ಹಲ್ಲುಜ್ಜಿಕೊಳ್ಳಬಾರದು. ದಂತಶುದ್ಧಿ ಯಾದ ಬಳಿಕ ಬೆಳಗಿನ ಜಳಕವನ್ನಾಚರಿಸಬೇಕು. ಕೆರೆ ತೊರೆ ಸರೋವರಾದಿ ಗಳು ಸ್ನಾನಕ್ಕೆ ಪ್ರಶಸ್ತಗಳು. ರೂಪ ತೇಜ ಬಲ ಶುಚಿ ಆಯುಷ್ಯ ಆರೋಗ್ಯ ಧೈರ್ಯ ಮೇಧಾವಂತಿಕೆ ದುಸ್ಸ್ವಪ್ನನಾಶ ಇವು ಸ್ನಾನದ ಗುಣಗಳು. ಶಿವಾಲ ಯದ ಬಳಿಯಿರುವ ತಿಳಿನೀರು ಶಿವಗಂಗೆ ಎಂದು ತಿಳಿದು ಮಿಂದರೆ ಮುಮ್ಮ ಗಿಲು; ಶಿವಭಾವ ಸಮನಿಸುತ್ತದೆ. ಪಂಚಬ್ರಹ್ಮ ಮಂತ್ರ ಶಿವಾಂಗವೆನಿಸಿದೆ; ಶಿವಬ್ರಹ್ಮಾಂಗವಿದ್ಯೆಯೆನಿಸಿದೆ ಇದನ್ನು ಮೀಯುವಾಗ ಮೂರುವೇಳೆ ಪಠಿಸಿ ದಲ್ಲಿ ಪಾಪವೆಲ್ಲ ಪರಿಹಾರವಾಗುತ್ತದೆ. ಮೂಲಮಂತ್ರವನ್ನಾದರೂ ಜಪಿಸುತ್ತ ಮೀಯಬೇಕು. ಮೈದೊಳೆದ ಬಳಿಕ ತೇವದ ಬಟ್ಟೆಯನ್ನು ಬಿಟ್ಟು ಬಿಳಿ ಮಡಿಯನ್ನುಡಬೇಕು. ಇಷ್ಟಲಿಂಗವನ್ನು ಕರಸ್ಥಲದಲ್ಲಿರಿಸಿ ಮಜ್ಜನ ಮಾಡಿ ಭಸ್ಮ ಸ್ನಾನವನ್ನು ಮಾಡಿಸಬೇಕು. ಲಿಂಗಾರ್ಚಕನು ಶುದ್ಧಾಂತಃಕರಣನಾಗಿ ಶುಚಿಯಾಗಿ ಭಸಿತವನ್ನು ತೆಗೆದುಕೊಂಡು ಮೂಲಮಂತ್ರದಿಂದ ಆರು ಸಲ ಅಭಿ ಮಂತ್ರಿಸಿ ಈಶಾನ ಮಂತ್ರದಿಂದ ಶಿರಸ್ಸಿಗೆ, ತತ್ಪುರುಷ ಮಂತ್ರದಿಂದ ಮುಖಕ್ಕೆ, ಅಘೋರ ಮಂತ್ರದಿಂದ ಹೃದಯಕ್ಕೆ, ವಾಮದೇವ ಮಂತ್ರದಿಂದ ಗುಹ್ಯಕ್ಕೆ, ಸದ್ಯೋಜಾತ ಮಂತ್ರದಿಂದ ಪಾದಗಳಿಗೆ, ಓಂಕಾರದಿಂದ ಸರ್ವಾಂಗಕ್ಕೆ ಸೇಚನ ಮಾಡಬೇಕು. ಬಳಿಕ ಭಸ್ಮಸ್ನಾನ! ಇದು ಆಗ್ನೇಯ ಸ್ನಾನ! ಆಗಮ ವಿಹಿತ, ಉತ್ತಮ. ಶುಷ್ಕ ಭಸ್ಮದಿಂದ ಮೂಲಮಂತ್ರೋಚ್ಚಾರದಿಂದ ಸರ್ವಾಂಗ ವನ್ನು ಲೇಪಿಸಬೇಕು. ಬಳಿಕ ಭಸ್ಮವನ್ನು ಮಂತ್ರೋದಕದಲ್ಲಿ ಕಲಸಿ ಉದ್ಧೂಳನ ವನ್ನಾಚರಿಸಬೇಕು. ಎಡ ಅಂಗೈಯಲ್ಲಿ ಷಟ್ಕೋಣವನ್ನು ಬರೆದು ಭಸ್ಮವನ್ನಿ ರಿಸಬೇಕು. ಭಸ್ಮದೊಡನೆ ಅಂಗಾಂಗಗಳಲ್ಲಿ ಮಂತ್ರಸಂಬಂಧ ಅಂದರೆ ಬೀಜಾಕ್ಷರ ಸಂಬಂಧವನ್ನು ಹೀಗೆ ಮಾಡಬೇಕು. ಮುಖದಲ್ಲಿ ಪ್ರಣವ, ತೋಳುಗಳೆರಡ ರಲ್ಲಿ ವಾಕಾರ–ಯಕಾರಗಳು; ಗುಹ್ಯದಲ್ಲಿ ಅಥವಾ ಹೃದಯದಲ್ಲಿ ಶಿಕಾರ, ಪಾದ ಗಳೆರಡರಲ್ಲಿ ನಕಾರ–ಮಕಾರಗಳು ಹೀಗೆ ಸಂಬಂಧಿಸಿ ಮೂಲಮಂತ್ರದಿಂದ

ವಿಭೂತಿಯನ್ನು ಆರು ಸಲ ಅಭಿಮಂತ್ರಿಸಬೇಕು. ಬಳಿಕ ಮುಂದೆ ಹೇಳಿದ ೩೨ ಸ್ಥಾನಗಳಲ್ಲಿ ಭಸ್ಮಧಾರಣವನ್ನು ಮಾಡಬೇಕು. ತಲೆ, ಹಣೆ, ಕಿವಿಗಳೆರಡು, ಕಣ್ಣುಗಳೆರಡು, ಮೂಗು, ಮೊಗ, ಕೊರಳು, ಕತ್ತುಗಳೆರಡು, ಮೊಳಕೈಗಳೆರಡು, ಮುಂಗೈಗಳೆರಡು, ಹೃದಯ (ಎದೆ), ಎದೆಯ ಅಕ್ಕ ಪಕ್ಕಗಳು, ಹೊಕ್ಕುಳ, ಗುದ, ಗುಹ್ಯ, ತೊಡೆಗಳೆರಡು, ತೊಡೆಗಳ ಮುಂಬದಿಗಳು, ಮೊಳಕಾಲುಗಳೆರಡು, ಪಾದಗಳೆರಡು ಇವು ವಿಭೂತಿಧಾರಣ ಸ್ಥಾನಗಳು. ಬಳಿಕ ರುದ್ರಾಕ್ಷಧಾರಣ :

ಶಿಖೆಯಲ್ಲಿ ಒಂದು, ಶಿಖರದಲ್ಲಿ ಮೂವತ್ತು, ಕೊರಳಲ್ಲಿ ಮೂವತ್ತಾರು, ಒಂದೊಂದು ತೋಳಿನಲ್ಲಿ ಹದಿನಾರು, ಮುಂಗೈಯಲ್ಲಿ ಹನ್ನೆರಡು, ಹೆಗಲಿನಲ್ಲಿ ಅಯ್ವನೂರು, ಜಪಮಾಲೆಗೆ ನೂರೆಂಟು ರುದ್ರಾಕ್ಷಗಳಿರಬೇಕು. ೨-೩-೫-೭-೧೧ ರುದ್ರಾಕ್ಷ ಮಾಲೆಗಳನ್ನು ಕತ್ತಿನಲ್ಲಿ ಹಾಕಿಕೊಳ್ಳುವುದು. ಮುನ್ನೂರು ರುದ್ರಾಕ್ಷಧಾರಣ ಅಧಮ, ಐದುನೂರು ರುದ್ರಾಕ್ಷಧಾರಣ ಮಧ್ಯಮ; ಒಂದು ಸಾವಿರ ರುದ್ರಾಕ್ಷಧಾರಣ ಉತ್ತಮ.

ತ್ರಿಕಾಲದಲ್ಲಿಯಾಗಲಿ ಷಟ್ಕಾಲದಲ್ಲಿಯಾಗಲಿ ಲಿಂಗಪೂಜೆಯನ್ನಾಚರಿಸಬೇಕು.

> "ತತ್ರಿಸಂಧ್ಯಮುಪಾಸ್ಯೋಽಹ ಮಾಂತರಃ ಸವಿತುಃ ಪರಃ
> ಭರ್ಗ ಮುಖ್ಯಾಭಿಧಾನಶ್ಚ ಪ್ರಾಣಧೀ ಚೋದಕಃ ಸದಾ ।
> ಅರುಣಸ್ಯೋದಯೇ ಸೂರ್ಯಸ್ಯೋದಯೇ ಸಂಗವೇ ತಥಾ
> ಮಧ್ಯಾಹ್ನೆ ಚ ತತಃ ಸಾಯ ಮರ್ಧರಾತ್ರೇ ಚ ಸುವ್ರತೇ
> ಉತ್ತಮೈರರ್ಚನೀಯೋಽಹಂ ಷಟ್ಕಾಲಂ ಭಕ್ತಿಶಾಲಿಭಿಃ ॥....
> ಜಪೇತ್ ಷಡಕ್ಷರೀಂ ಸಾಂಗಾಂ ಶ್ರೀ ರುದ್ರಾದೀನ್ವಿಶೇಷತಃ
> ಸರ್ವೇಭ್ಯೋ ದ್ರವ್ಯಯಜ್ಞೇಭ್ಯೋ ಜಪಯಜ್ಞೋ ವಿಶಿಷ್ಯತೇ
> ಜಪಯಜ್ಞಂ ಸಮಾಪ್ಯೈವಂ ಗುರ್ವಾದೀನಭಿವಾದಯೇತ್ ॥"

ಒಂದು ದಿನದ ಒಂದು ಭಾಗದ ಪೂಜೆಯನ್ನು ಈ ಜಪಯಜ್ಞದೊಡನೆ ಮುಗಿಸಿ, ಎರಡನೆಯ ಭಾಗದಲ್ಲಿ ಶಿಷ್ಯರಿಗೆ ಶಿವತತ್ತ್ವದಿಂದ ಕೂಡಿದ ನಿಗಮಾಗಮಗಳ ಅಧ್ಯಯನವನ್ನು ಮಾಡಿಸಬೇಕು; ಶಿವತತ್ತ್ವವನ್ನು ಮನ ಮುಟ್ಟು

ವಂತೆ ಶಿಷ್ಯರಿಗೆ ಬೋಧಿಸಬೇಕು. ಇದಾದ ಬಳಿಕ ಸಂಗವ ಕಾಲದ ಪೂಜೆಯನ್ನು ಸಾಂಗವಾಗಿ ಭಕ್ತಿಯಿಂದ ಆಚರಿಸಬೇಕು. ಪತ್ರ ಪುಷ್ಪ ಗುಗ್ಗುಲಾದಿಗಳನ್ನು ಸಂಗ್ರಹಿಸಬೇಕು. ಶಿವತೀರ್ಥವನ್ನು ಅಂದರೆ ಮಂಗಲಜಲವನ್ನು ತರಬೇಕು. ಬಳಿಕ ಮಧ್ಯಾಹ್ನ ಪೂಜೆಗೆ ಅಣಿಯಾಗಬೇಕು.

"ತತೋ ಮಾಧ್ಯಾಹ್ನಿಕೀ ಪೂಜಾ ಕಾರ್ಯಾ ಗುರ್ವೀ ಲಘುಸ್ತು ವಾ
ಮಹತೀ ವಾ ಯಥಾಶಕ್ತಿ ಶ್ರದ್ಧಾಭಕ್ತಿಯುತಾತ್ಮನಾ ।
ಪಂಡಿತೋ ವಾಽಥ ಮೂರ್ಖೋ ವಾ ಪ್ರಿಯೋ ವಾ ದ್ವೇಷ್ಯ ಏವ ವಾ
ಸಂಪ್ರಾಪ್ತೋ ಯಸ್ತು ಪೂಜಾಂತೇ ಸ ಏವಾಹಂ ನ ಸಂಶಯಃ ।
ಮತ್ತೋಽಧಿಕೋ ಜಂಗಮೋ ಹಿ ಸ ಪೂಜ್ಯೋ ಗೃಹಮಾಗತಃ
ಅನ್ನ ಪಾನಾದಿಭಿಶ್ಚೈವ ತದಭೀಷ್ಟ ಪ್ರದಾನತಃ ।
ಏವಂ ಜಂಗಮಮಾರಾಧ್ಯ ಪ್ರಸಾದ ಮುಪಭುಜ್ಯ ಚ
ಸುಖಮಾಸ್ಥಾಯ ಮಚ್ಚಿತ್ತಸ್ತದನ್ನಂ ಪರಿಣಾಮಯನ್ ।
ಮತ್ ಸ್ತೋತ್ರಾಣಿ ಪಠೇದ್ವಾಪಿ ಪುರಾಣಾನ್ಯಭ್ಯಸೇತ್ತು ವಾ
ಆಸಾಯಮಥ ಕುರ್ವೀತ ಯತ್ನಂ ಪೋಷ್ಯಾರ್ಥ ಸಿದ್ಧಯೇ ॥"

ಮಧ್ಯಾಹ್ನ ಪೂಜೆಯನ್ನು ಸಂಕ್ಷಿಪ್ತವಾಗಿಯೋ ವಿಸ್ತಾರವಾಗಿಯೋ ಇಲ್ಲವೆ ಯಥಾಶಕ್ತಿಯಾಗಿಯೋ ಶ್ರದ್ಧಾಭಕ್ತಿಯಿಂದಾಚರಿಸಿ ಆ ವೇಳೆಗೆ ಬಂದವನು ಜ್ಞಾನಿಯಾಗಲಿ-ಅಜ್ಞಾನಿಯಾಗಲಿ, ಮಿತ್ರನಾಗಲಿ ಶತ್ರುವಾಗಲಿ ಭೇದ ಮಾಡದೆ ಆತ ಶಿವಸ್ವರೂಪವೆಂದು ಭಾವಿಸಿ ಆದರಿಸಬೇಕು. ಜಂಗಮನೇ ಬಂದರೆ ಶಿವನಿಗಿಂತ ಶ್ರೇಷ್ಠವೆಂದು ಭಾವಿಸಿ ಜಂಗಮ ದಾಸೋಹವನ್ನು ಮಾಡಬೇಕು. ಪ್ರಸಾದವನ್ನಿತ್ತು ಅವರಿಗೆ ಅಭೀಷ್ಟವಾದುದನ್ನೀಯಬೇಕು. ಬಂದ ಜಂಗಮವನ್ನಾರಾಧಿಸಿ ಪ್ರಸಾದವನ್ನು ಆರೋಗಿಸಿ ಪರಿಣಮಿಸಿ ಶಿವಚಿತ್ತನಾಗಿ ಸುಖದಿಂದಿರುವುದು. ಬಳಿಕ ಸಂಜೆ ಪೂಜೆಯನ್ನಾಚರಿಸಬೇಕು.

"ತಸ್ಮಾತ್ ಸ್ವಶಕ್ತ್ಯಾ ಸಂಪೂಜ್ಯ ಸೂರ್ಯೋಢಮತಿಥಿಂ ದ್ವಿಜಃ
ಪ್ರಸಾದಮುಪಭುಜ್ಯಾಥ ಮತ್ಸ್ತೋತ್ರಾಣಿ ಪಠೇದಪಿ ।

ಆತ್ಮಾಭಿರುಚಿತಾಂ ಶಯ್ಯಾಮಧಿಷ್ಠಾಯ ಶುಚಿಸ್ತು ಮಾಂ
ಸ್ಮರನ್ ಸಮಾಧಿಮಾಸ್ಥಾಯ ಶಯೀತಾऽರ್ಧ್ವಾಕ್ಶಿರಾಃ ಸುಖಂ ||"

ಹೊತ್ತು ಮುಳುಗಿದ ಬಳಿಕ ಸ್ವಶಕ್ತಿಗನುಸರಿಸಿ ಪೂಜಿಸಿ ಅತಿಥಿಯನ್ನಾರಾಧಿಸಿ, ಪ್ರಸಾದವನ್ನು ಸ್ವೀಕರಿಸಿ, ಬಳಿಕ ಶಿವಸ್ತೋತ್ರಗಳನ್ನು ಪಠಿಸಿ, ಶುಚಿಯಾಗಿ ತನಗೆ ಬೇಕಾದಂತಹ ಹಾಸುಗೆಯ ಮೇಲೆ ಶಿವಧ್ಯಾನದಿಂದ ಮೂಡಣಕ್ಕೆ ತಲೆಮಾಡಿ ಮಲಗಿದರೆ ಅದೇ ಆತನ ಸಮಾಧಿಯೆನಿಸುತ್ತದೆ.

ಪಂಡಿತ ಮೂರ್ಖ ಮಿತ್ರ ಶತ್ರುಗಳನ್ನು ಸಮವಾಗಿ ಶಿವಸ್ವರೂಪರನ್ನಾಗಿ ಕಾಣಬೇಕು ಎಂದು ಹೇಳಿರುವಲ್ಲಿದೆ ಸಾಮ್ಯವಾದದ ಮಾನವೀಯ ಮೌಲ್ಯ! ಜೊತೆಗೆ ಜಂಗಮಾಧಿಕ್ಯ ಜಂಗಮಾರಾಧನ ಪ್ರಸಾದ ಸ್ವೀಕಾರ ಪ್ರಸಾದ ಮೌಲ್ಯಗಳು ಅನಾದಿ ವೀರಶೈವ ಕಾಲದಿಂದ ಬಂದವುಗಳೆಂಬುದು ಚನ್ನಾಗಿ ಮನದಟ್ಟಾಗುತ್ತದೆ. ಶಿವ ಸ್ತೋತ್ರಗಳಿಗೂ ಶಿವ ಪುರಾಣಗಳಿಗೂ ಅಂದೆ ಒಳ್ಳೆಯ ಭಾವನೆಯಿದ್ದಿತು. ಅರ್ಚನ ಅರ್ಪಣಗಳಾದ ನಂತರ ಅವನ್ನು ಪಠಿಸುವ ಪರಿಪಾಠವಿದ್ದಿತು. ಅದೇ ಒಂದು ಅನುಭವವಾಗಿದ್ದಿತು. ಆಗ ಮಾನುಭಾವವೂ ನಡೆಯುತ್ತಿದ್ದಿತು. ಜಪಯಜ್ಞಕ್ಕೆ ಗುರುವಂದನಕ್ಕೆ ಹೆಚ್ಚಿನ ಪ್ರಾಶಸ್ತ್ಯವಿದ್ದಿತು.

— ೪ —

ಅರ್ಚನ ವಿಶೇಷವೇನು ? ಗ್ರಹಣ ವಿಶೇಷನಿಯಮವೇನು ? ರಂಗವಲ್ಲೀ ವಿಧಾನವೇನು ? ವರ್ತಿಕಾಸಾಧನ ಅಂದರೆ ಬತ್ತಿಗಳ ಬಗೆ ಏನು ? ಸಲ್ಲುವ ಪತ್ರಪುಷ್ಪಗಳಾವು ? – ತರುವ ಬಗೆಯೇನು ? ಎಂದು ಶಿವೆಯ ಕೇಳಿಕೆಗೆ ಶಿವನು ಹೀಗೆ ಹೇಳುವವನು :

ಲಘ್ವೀ, ಗುರ್ವೀ, ಮಹತೀ ಎಂದು ಲಿಂಗಪೂಜೆ ಮೂಬಗೆ ! ಇವುಗಳಲ್ಲಿ ಮಹತೀಪೂಜೆ ಉತ್ತಮ, ಗುರ್ವೀಪೂಜೆ ಮಧ್ಯಮ; ಲಘ್ವೀಪೂಜೆ ಅನುತ್ತಮ ಮತ್ತು ಅಶಕ್ತರಿಗೆ ಅನುಕೂಲವಾದ ಪೂಜೆ! ಅಲ್ಲದೆ ನಡುಹಗಲು–ಮುಚ್ಚಂಜೆಗಳಲ್ಲಿ ಲಘುಪೂಜೆ ಮಾಡಬಹುದು. "ತ್ರಿಕಾಲಮರ್ಚನಾಂ ಕುರ್ಯಾಚ್ಛಕ್ತಃ ಷಟ್ಕಾಲಿಮೇವ ವಾ |" ಶಕ್ತರು ತ್ರಿಕಾಲ ಅಥವಾ ಷಟ್ಕಾಲ ಪೂಜೆಗಳನ್ನು ಮಾಡಬೇಕು. ಉದಯ–ಮಧ್ಯಾಹ್ನ–ಮುಸ್ಸಂಜೆ ಇವು ತ್ರಿಕಾಲಗಳು.

ಅರುಣೋದಯ– ಸೂರ್ಯೋದಯ – ಸಂಗವ–ಮಧ್ಯಾಹ್ನ–ಸಂಜೆ– ನಟ್ಟಿರುಳು ಇವು ಷಟ್ಕಾಲಗಳು. ಆ ಆ ವೇಳೆಯಲ್ಲಿ ಹೇಗೆ ಹೇಗೆ ಏನೇನು ಮಾಡಬೇಕೆಂಬುದು ಕಾರಣಾಗಮದಲ್ಲಿ ನಾಲ್ಕನೆಯ ಪಟಲದಲ್ಲಿ ನಿರೂಪಿತವಾಗಿದೆ. ಪೂಜಿಸದೆ ಪ್ರಸಾದವನ್ನು ಸ್ವೀಕರಿಸಬಾರದು. ಇಷ್ಟಲಿಂಗಪೂಜೆಗೆ ರಂಗವಲ್ಲಿ ಹೇಗೆ ಹಾಕಬೇಕು; ಬತ್ತಿಗಳನ್ನೆಷ್ಟು ಹಚ್ಚಬೇಕು; ನಂದಿಬಟ್ಟಲ ಹೂವು ಕಣಿಗಿಲ ಹೂವು ಬಕುಲ ದ್ರೋಣ ಪುನ್ನಾಗ ಮಂದಾರ ಮೊದಲಾದ ಹೂವುಗಳನ್ನು ಬಿಲ್ವ ಲೋಧ್ರ ದತ್ತೂರ ನಿರ್ಗುಂಡಿ ಅಶೋಕ ಪತ್ರಗಳನ್ನು ತರಬೇಕು; ಲಿಂಗಕ್ಕೆ ಧರಿಸಬೇಕು. ಶುಭ್ರವರ್ಣದ ಪುಷ್ಪಗಳು ಸಾತ್ವಿಕಗಳು; ಮುಕ್ತಿಪ್ರದಗಳು. ರಕ್ತವರ್ಣದ ಪುಷ್ಪಗಳು ರಾಜಸಗಳು; ಭೋಗಸಿದ್ಧಿಕಾರಿಗಳು. ಮಿಶ್ರ ಪೀತವರ್ಣದ ಪುಷ್ಪಗಳು ಭೋಗ–ಮೋಕ್ಷ ಪ್ರದಗಳು. ನೀಲೋತ್ಪಲ ಪುಷ್ಪದ ಹೊರತಾದ ಕಪ್ಪು ಹೂವುಗಳು ತಾಮಸಗಳು; ಇವನ್ನು ಪೂಜೆಗೆ ಯಾವಾಗಲೂ ಉಪಯೋಗಿಸಬಾರದು. ವಸಂತ ಕಾಲದಲ್ಲಿ ಕದಂಬ, ಚಂಪಕ, ಪುನ್ನಾಗ ಬೃಹತೀ ಪುಷ್ಪಧಾರಣದಿಂದ ಅಶ್ವಮೇಧಫಲವುಂಟಾಗುತ್ತದೆ. ಗ್ರೀಷ್ಮಕಾಲದಲ್ಲಿ ಪಾಟಲೀ ಮಲ್ಲಿಕೆ ಶತಪತ್ರಗಳ ಅರ್ಪಣದಿಂದ ಅಗ್ನಿಷ್ಟೋಮಫಲವುಂಟಾಗುತ್ತದೆ. ವರ್ಷ ಋತುವಿನಲ್ಲಿ ಕೆಸರ್ಮಲ್ಲಿಗೆ ಮಲ್ಲಿಗೆಗಳನ್ನು ಧರಿಸಿದರೆ ಅಶ್ವಮೇಧ ಫಲ. ಶರತ್ಕಾಲದಲ್ಲಿ ನೀಲೋತ್ಪಲ ಕರವೀರಾದಿ ಹೂವುಗಳನ್ನು ಧರಿಸಿದರೆ ಶತಕ್ರತುಫಲ. ಹೇಮಂತ ಋತುವಿನಲ್ಲಿ ಕರ್ಣಿಕಾರಕ ಕಲ್ಹಾರಾದಿಗಳನ್ನು ಧರಿಸಿದರೆ ಸರ್ವಯಜ್ಞ ಫಲ. ಶಿಶಿರ ಋತುವಿನಲ್ಲಿ ದ್ರೋಣ ಕರ್ಣಿಕಾರಕಾದಿ ಪುಷ್ಪಗಳನ್ನು ಧರಿಸಿದರೆ ಹೆಚ್ಚು ಪ್ರಶಸ್ತ ಫಲ. ಬಿಲ್ವಪತ್ರ ಬನ್ನಿ ಪತ್ರಾದಿಗಳಿಗೆ ನಿರ್ಮಾಲ್ಯವಿಲ್ಲ. ಇವನ್ನು ಇರಿಸಿಕೊಂಡು ನಿತ್ಯ ಧರಿಸಬೇಕು. ಉಳಿದ ಹೂವುಗಳನ್ನು ಅಂದಿನವುಗಳನ್ನು ಅಂದಂದೇ ಧರಿಸಬೇಕು. ಕೈಯಲ್ಲಿ ಉಟ್ಟಬಟ್ಟೆಯಲ್ಲಿ ತಂದ ಪತ್ರ ಪುಷ್ಪ ಫಲಗಳು ಅಪವಿತ್ರಗಳು; ಪೂಜೆಗೆ ಸಲ್ಲವು. ಮತ್ತು ನೆಲಕ್ಕೆ ಬಿದ್ದುದು, ಮೂಸಿದುದು, ಕಿಂಜಲ್ಕವಿಲ್ಲದುದು, ಹುಳ ಮುಟ್ಟಿದುದು, ತುಂಬಿಲ್ಲದುದು, ರೋಗಗ್ರಸ್ತವಾದುದು ಪೂಜೆಗೆ ಸಲ್ಲದು.

"ಜಲಜಂ ಸ್ಥಲಜಂ ವಾಽಪಿ ಯಥೋತ್ಪನ್ನಂ ತಥೈವ ಚ
ಪತ್ರಾಣ್ಯಪಿ ತಥಾ ನ್ಯಸೇದ್ಬಿಲ್ವಪತ್ರಮಧೋಮುಖಂ ।
ಸರ್ವೋಪರಿ ನ್ಯಸೇದ್ಬಿಲ್ವಂ ಬಿಲ್ವೋಪರಿ ನ ಕಿಂಚನ

ಸರ್ವೋಪರಿ ನ್ಯಸೇದ್ಭಸ್ಮ ಭಸ್ಮೋಪರಿ ನ ಕಿಂಚನ ।
ಮತ್ಪೂಜಾ ಕ್ರಿಯತೇ ಹ್ಯೇವಂ ಕೈವಲ್ಯಂ ಲಭತೇ ಧ್ರುವಂ ॥"

ನೆಲ ಜಲಗಳಲ್ಲಿ ಹುಟ್ಟಿದ ಪತ್ರಪುಷ್ಪಗಳನ್ನು ಹಾಗೆಯೆ ಧರಿಸಬೇಕು. ಬಿಲ್ವಪತ್ರವನ್ನು ಮಾತ್ರ ಕೆಳಮೊಗವಾಗಿ ಧರಿಸಬೇಕು. ಉಳಿದ ಹೂವು ಪತ್ರಗಳನ್ನು ಧರಿಸಿದ ಬಳಿಕ ಬಿಲ್ವವನ್ನು ಧರಿಸಬೇಕು; ಬಿಲ್ವದ ಮೇಲೆ ಇನ್ನೇನೂ ಧರಿಸಬಾರದು. ಎಲ್ಲದರ ಮೇಲೆ ಭಸ್ಮವನ್ನು ಧರಿಸಬೇಕು; ಭಸ್ಮದ ಮೇಲೆ ಮತ್ತೇನನ್ನೂ ಧರಿಸಬಾರದು. ಹೀಗೆ ಶಿವಲಿಂಗ ಪೂಜೆಯನ್ನು ಮಾಡಿದಲ್ಲಿ ದಿಟವಾಗಿ ಕೈವಲ್ಯ ಲಭಿಸುತ್ತದೆ.

— ೫ —

ದೇವದೇವನೆ, ಮಹಾದೇವನೆ, ಪಂಚಕೃತ್ಯ ಪರಾಯಣನೆ, ಜಗದೊಡೆಯನೆ ಸರ್ವಾತ್ಮನೆ ನಿನಗೆ ಮತ್ತೆ ಮತ್ತೆ ನಮಸ್ಕರಿಸುವೆ! ಪೂಜೆಗೆ ಬೇಕಾದ ಪಾತ್ರೆಗಳೆಷ್ಟು? ಅವುಗಳ ವಿಶೇಷ ಲಕ್ಷಣವೇನು? ಪೂಜಾಕಾಲದಲ್ಲಿ ಸಾಧಕ (ಪೂಜಕನು) ಹೇಗಿರಬೇಕು? ಅಭಿಷೇಕ ದ್ರವ್ಯಗಳಾವವು? ಅರ್ಚಕನಿಗಿರಬೇಕಾದ ನಿಯಮವೇನು? ಸಕಲ ಪ್ರಾಣಿ ನಿರ್ಮಾಣ ಕಾರಣನಾದ ನೀನು ಎಲ್ಲವನ್ನೂ ಹೇಳು!

"ಪುಷ್ಕಲಾಚ್ಯೋಪಕರಣಾನ್ಮನೋ ನೈರ್ಮಲ್ಯ ಸಂಭವಃ
ನಿರ್ಮಲೇ ನೈವ ಮನಸಾ ಪೂಜಕಃ ಫಲಭಾಗ್ಭವೇತ್ ।"

ಪುಷ್ಕಳವಾಗಿರಬೇಕು ಪೂಜೋಪಕರಣಗಳು. ಪುಷ್ಕಳ (ವಿಪುಲ)ವಾಗಿದ್ದರೆ ಮನೋನ್ನೈರ್ಮಲ್ಯವುಂಟಾಗುತ್ತದೆ. ಮನೋನ್ನೈರ್ಮಲ್ಯದಿಂದ ಪೂಜಕನು ಫಲಶಾಲಿಯಾಗುತ್ತಾನೆ. ಪುಷ್ಕಲ ಪೂಜಾ ಸಾಮಗ್ರಿಯಿಂದ ಪೂಜೆ ಪುಷ್ಕಲ, ಸಂಪತ್ತು ಪುಷ್ಕಲ. ಸಾಮಗ್ರಿಯಿಲ್ಲದೆ ಸಂಕಲ್ಪ ಮಾತ್ರದಿಂದ ಪೂಜಿಸಿದರೆ ಪೂಜಾಫಲ ಲಭಿಸದು. ಪೂಜಾ ಸಾಮಾಗ್ರಿಯನ್ನು ಮೊದಲೆ ಸಜ್ಜಾಗಿರಿಸಿಕೊಂಡಿರಬೇಕು. ನಡುನಡುವೆ ಇಲ್ಲದ್ದನ್ನು ಕರೆದು ತರಿಸಿಕೊಳ್ಳಬಾರದು. ಅಜ್ಞನಾಗಲಿ ಸುಜ್ಞನಾಗಲಿ ಆದರಿಂದ ಚಿತ್ತಚಾಂಚಲ್ಯವುಂಟಾಗುತ್ತದೆ. ಪೂಜೆಯಲ್ಲಿದ್ದಾಗ ಪರಿಚಾರಕರ ಮೇಲೆ ಕೋಪಿಸಿಕೊಳ್ಳಬಾರದು. ಕೋಪಿಸಿಕೊಂಡರೆ ಶಾಂತಿಗೆ ಭಂಗ; ಶಿವ ಸನ್ನಿಧಿಗೆ ದೂರ. ಪೂಜಾಕಾಲದಲ್ಲಿ ಆಲಸ್ಯ

ಆಕಳಿಕೆ ನಿದ್ರೆಗಳಿಗೆ ಒಳಗಾಗಬಾರದು. ವಿಷಯಾಸಕ್ತಿಯಿರಬಾರದು. ಶಿವಾಶ್ರಿತ ಮನಸ್ಸುಳ್ಳವನಾಗಿರಬೇಕು. ಮನಸ್ಸಿನಲ್ಲಿ ಮತ್ತೊಂದನ್ನು ಸ್ಮರಿಸಬಾರದು. ಪೂಜಾಮಧ್ಯದಲ್ಲಿ ಯಾರಾದರೂ ಕರೆದರೆ ಹೇಳಿಕಳಿಸಿದರೆ ಬೇಗ ಮುಗಿಸಬಾರದು. ಬೇಗ ಮುಗಿಸಿದರೆ ಅದು ಶಿವನಿಗೆ ಸಲ್ಲದು ಒಂದು ವೇಳೆ ತನ್ನ ಗುರುವೆ ಕರೆದರೆ ಪೂಜೆಯನ್ನು ಗುರುವಿಗೆ ನಿವೇದಿಸುವುದು. ನಿವೇದಿಸಿದರೂ ಕರೆದರೆ ಆಗ ಗುರುವಿನ ಆಜ್ಞೆಯನ್ನು ಪರಿಪಾಲಿಸಬೇಕು ಶ್ರೀಗುರುವೇ ಶಿವನು. ಇವರಿಬ್ಬರಲ್ಲಿ ಭೇದವಿಲ್ಲ. ಅಭೇದ ಭಾವನೆಯಿಂದ ಗುರುವಿನ ಅಪ್ಪಣೆಯನ್ನು ಪರಿಪಾಲಿಸಬೇಕು. ಪೂಜಾಕಾಲದಲ್ಲಿ ಲೌಕಿಕಕರವನ್ನು ಸ್ಮರಿಸಿ ಪೂಜೆಯನ್ನು ತ್ವರಿತಗೊಳಿಸಿದಲ್ಲಿ ಶಿವದ್ರೋಹಕ್ಕೆ ಗುರಿಯಾಗಬೇಕಾಗುತ್ತದೆ. ಕಾಲಭೈರವ ಯಾತನೆಗೆ ಒಳಗಾಗಬೇಕಾಗುತ್ತದೆ. ಶಿವಮನಸ್ಕನಾಗಿ ಕರ್ಮ(ಕಾರ್ಯ)ವನ್ನು ಸ್ಮರಿಸಿದರೆ ಅದರಿಂದ ಕೇಡಿಲ್ಲ ಶಿವಸ್ವರೂಪನಾಗಿ ಕೈಲಾಸವನ್ನು ಪಡೆಯುತ್ತಾನೆ. ತಾನೇ ತಂದ ಪತ್ರ ಪುಷ್ಪ ಫಲಗಳು ಶಿವನಿಗೆ ಪ್ರಿಯವಾದವುಗಳು. ಅವುಗಳಿಗೆ ತಕ್ಕ ಫಲಗಳನ್ನು ಶಿವನು ಕೊಡುವನು. ಪತ್ರ ಪುಷ್ಪ ಪಾತ್ರಗಳಿಲ್ಲದೆ ಪೂಜಿಸಬಾರದು. ಸರ್ವ ಪ್ರಯತ್ನ ಮಾಡಿ ಇವನ್ನು ಸಂಪಾದಿಸಬೇಕು. ಇವುಗಳ ವಿಭವ ವಿಸ್ತಾರದಿಂದ ಲಿಂಗವನ್ನು ಪೂಜಿಸಬೇಕು. ಪೂಜಾಪಾತ್ರೆಗಳು ಸುವರ್ಣದವಿದ್ದರೆ ಮೇಲು. ಇಲ್ಲವಾದರೆ ಬೆಳ್ಳಿಯದಿರಬೇಕು. ಇದಕ್ಕೂ ಶಕ್ತಿಯಿಲ್ಲದಿದ್ದರೆ ತಾಮ್ರ ಪಾತ್ರೆಯಾದರೂ ಇರಬೇಕು. ವಿರಕ್ತನಾದರೆ ತೆಂಗಿನ ಚಿಪ್ಪಿನ ಪಾತ್ರೆಯಲ್ಲಿ ಪೂಜಿಸಬೇಕು. ಬೆಳ್ಳಿ ಬಂಗಾರ ಪಾತ್ರೆಗಳು ಈತನಿಗೆ ಸರಿಯಲ್ಲ.

ಎಲ್ಲರಿಗೂ ಬಿಲ್ವಪತ್ರ ಪಾತ್ರ ಉತ್ತಮೋತ್ತಮು. ಬಿಲ್ವ ನಿರ್ಮಿತ ಪಾತ್ರಕ್ಕೆ ಸದೃಶವಾದ ಪಾತ್ರ ಭೂತಲದಲ್ಲಿಲ್ಲ. ಪಾತ್ರೆಗಳಲ್ಲಿ ಬಿಲ್ವ ಪಾತ್ರ ಶ್ಲಾಘ್ಯ; ಪತ್ರೆಗಳಲ್ಲಿ ಬಿಲ್ವ ಪತ್ರೆ ಶ್ರೇಷ್ಠ. ಪುಷ್ಪಗಳಲ್ಲಿ ನೀಲೋತ್ಪಲ (ಕನ್ನೈದಿಲೆ) ಸರಶ್ರೇಷ್ಠ; ಶ್ರೇಷ್ಠಕ್ಕೆ ಶ್ರೇಷ್ಠ. ಶುದ್ಧಭಾವದಿಂದ ಸಮುಚ್ಚರಿಸಿ ಅಪ್ರಾಕೃತ್ತ ಮಂತ್ರಗಳಿಂದ ಎಲ್ಲವನ್ನು ಶಿವನಿಗೆ ಸಮರ್ಪಿಸಿದರೆ ಯಥೋಕ್ತಫಲವುಂಟಾಗುತ್ತದೆ. ತಾವೇ ಬೆಳೆಸಿದ ತಮ್ಮ ತೋಟದ ಪತ್ರ ಪುಷ್ಪ ಫಲಗಳು ಅತ್ಯಂತ ಉತ್ತಮಗಳು ಇಲ್ಲವಾದರೆ ಅರಣ್ಯ ಪತ್ರಪುಷ್ಪಗಳನ್ನು ತಾನೇ ತಂದು ಅರ್ಪಿಸ

ಬೇಕು; ಅರ್ಪಿಸಬೇಕು. ಶೂದ್ರರು ತಂದ ಕ್ರಯಕ್ಕೆ ತಂದ ಪತ್ರಪುಷ್ಪಗಳಿಂದ ಪೂಜಿಸಿದರೆ ಪತಿತನಾಗುವನು. ಎಕ್ಕೆ ತುಂಬೆ ತಾವರೆ ಮೊದಲಾದ ಹೂವುಗಳಿಂದ ಮತ್ತು ಬಿಲ್ವ ಬನ್ನಿ ಮೊದಲಾದ ಪತ್ರೆಗಳಿಂದ ಎಳ್ಳು ಅಕ್ಕಿ ಮೊದಲಾದ ಅಕ್ಷತೆಗಳಿಂದ ಭಕ್ತಿಯುಕ್ತ ಚಿತ್ತದಿಂದ ಲಿಂಗವನ್ನು ಅರ್ಚಿಸಬೇಕು.

ಪೂಜೋಪಯುಕ್ತ ಪಾತ್ರೆಗಳು, ಅವುಗಳ ಲಕ್ಷಣಗಳು : ಸಾಮಾನ್ಯಾರ್ಘ್ಯ(ಅರ್ಘ್ಯಸೌಟು), ಪಾದ್ಯ – ಅರ್ಘ್ಯ– ಆಚಮನ ಪಾತ್ರೆಗಳು ಮೂರು, ಸ್ನಾನ ಜಲದ ತ್ಯಾಗ – ಜ್ಞಾನ – ಆನಂದ ಹೆಸರಿನ ಪಾತ್ರೆಗಳು ಮೂರು, ಪಾದ ಪ್ರಸಾದೋದಕಕ್ಕೆ ಬೇಕಾದ ಆಧಾರ ಹೆಸರಿನ ಪಾತ್ರೆಗಳು ಮೂರು, ಶಿವಕುಂಭ (ಅಭಿಷೇಕಕ್ಕೆ ಬೇಕಾದ ಲೋಟ) ಇವು ಹನ್ನೊಂದು ಪಾತ್ರೆಗಳು. ಇವಲ್ಲದೆ ಇನ್ನೂ ಹಲವು ಅವಶ್ಯಕ ಪಾತ್ರೆಗಳು ಬೇಕು. ಅವಿವು : ಗಂಧದ ಬಟ್ಟಲು, ಧೂಪಾರ್ತಿ, ದೀಪಗಳು, ಘಂಟೆಗಳು, ಶಂಖ, ದಕ್ಷಿಣ, ಛತ್ರ, ಚಾಮರ, ತಾಲವೃಂತ ಅಂದರೆ ತಾಳೆಗರಿಯಿಂದ ಮಾಡಿದ ಬೀಸಣಿಗೆ – ಇವುಗಳನ್ನು ಸಂಪಾದಿಸಿ ಲಿಂಗಪೂಜೆಗೆ ಉಪಯೋಗಿಸಬೇಕು.

ಶಿವಕುಂಭ ಇಪ್ಪತ್ತು ಗುಂಜಿ ತೂಕದ್ದಿರಬೇಕು. ಅರ್ಘ್ಯಸೌಟು ಹತ್ತು ಗುಂಜಿ ತೂಕದ್ದಿರಬೇಕು. ಪಾದ್ಯ ಅರ್ಘ್ಯ ಆಚಮನ ಪಾತ್ರಗಳು (ಲೋಟಗಳು) ಒಂದೊಂದು ಏಳುವರೆ ಗುಂಜಿ ತೂಕದವುಗಳಿರಬೇಕು. ತ್ಯಾಗ – ಜ್ಞಾನ – ಆನಂದ ಪಾತ್ರಗಳು ಒಂದೊಂದು ಅಯ್ದು ಗುಂಜಿ ತೂಕದವುಗಳಿರಬೇಕು. ಆಧಾರ ಪಾತ್ರಗಳು (ಚಿಕ್ಕ ಬಟ್ಟಲುಗಳು ಅಥವಾ ನೈವೇದ್ಯ ಬಟ್ಟಲುಗಳು) ಒಂದೊಂದು ಎರಡುವರೆ ಗುಂಜಿ ತೂಕದವುಗಳಿರಬೇಕು, ಶಿವಕುಂಭವೂ ಅಷ್ಟೇ ತೂಕದ್ದಿರಬೇಕು.

ಪಾದಾರ್ಘ್ಯ ಆಚಮನ ಪಾತ್ರೆಗಳು ಚೌಕವಾಗಿರಬೇಕು ಅಂದರೆ ನಾಲ್ಕು ಮೂಲೆಗಳುಳ್ಳವುಗಳಾಗಿರಬೇಕು. ತ್ಯಾಗ – ಜ್ಞಾನ – ಆನಂದ ಹೆಸರಿನ ಲೋಟಗಳು ದುಂಡಗಿರಬೇಕು. ಗಂಧಾದಿ ಪಾತ್ರೆಗಳು ವೃತ್ತವಾಗಿ ಅಷ್ಟದಲಾನ್ವಿತವಾಗಿರಬೇಕು. ಹಣತೆಗಳು ಡಮರು ಆಕಾರದಲ್ಲಿರಬೇಕು. ನೀರಾಜನಗಳು ಏಕಮುಖ ತ್ರಿಮುಖ ಷಣ್ಮುಖಗಳುಳ್ಳವಾಗಿರಬೇಕು. ಮುತ್ತಿನ ಜಾಲದಿಂದ ಕೂಡಿದ ಚಂದಾದ ಛತ್ರವೊಂದನ್ನು ಸಂಪಾದಿಸಬೇಕು.

ತೊರೆ ಕೆರೆಗಳ ತೀರದಲ್ಲಾಗಲಿ, ನಿಸರ್ಗಸಿದ್ಧ ಶಿವಸ್ಥಲದಲ್ಲಾಗಲಿ, ನಿರ್ಜನ ಪ್ರದೇಶದಲ್ಲಾಗಲಿ, ತನ್ನ ಮನೆಯಲ್ಲಾಗಲಿ ಕುಳಿತು ಏಕಾಗ್ರ ಮನಸ್ಸಿನಿಂದ ಲಿಂಗವನ್ನು ಯಜಿಸಬೇಕು. ಸಾವಿರೆಂಟಾಗಲಿ, ಇಲ್ಲವೆ ನೂರೆಂಟಾಗಲಿ ಬಿಲ್ವ ದಲಗಳನ್ನು ಧರಿಸಬೇಕು. ಸಾವಿರ ತುಂಬೆ ಹೂಗಳನ್ನಾಗಲಿ ಎಕ್ಕೆಯ ಹೂವು ಗಳನ್ನಾಗಲಿ ಧರಿಸಬೇಕು. 'ಆರಗ್ವಧ' ಹೆಸರಿನ ಪತ್ರಿಗಳನ್ನು ಸಾವಿರನ್ನಾಗಲಿ, ನೂರೆಂಟನ್ನಾಗಲಿ, ಇಪ್ಪತ್ತೆಂಟನ್ನಾಗಲಿ ಧರಿಸಿ ನಿಯಮವಾಗಿ ಪೂಜಿಸಬೇಕು. ಪೂಜಾಕಾಲದಲ್ಲಿ ಹೆಚ್ಚು ಮಾತುಗಳನ್ನಾಡಬಾರದು. ಶಿವಾಗಮ, ಶಿವ ಪುರಾಣಗಳನ್ನು ಕೇಳಬಹುದು, ಕೇಳಿಸಬಹುದು. ಇವಕ್ಕೆ ಅನ್ಯವಾದ ಲೌಕಿಕ ಕಥಾಲಾಪಗಳನ್ನು ವರ್ಜಿಸಬೇಕು.

ತನ್ನ ತೋಟದಲ್ಲಿ ಬಿಟ್ಟ ಪುಷ್ಪಗಳು ಪ್ರಶಸ್ತಗಳು ಶಿವಾರ್ಚನೆಗೆ ! ದೇವಸ್ವ ವನ್ನು ದೇವತೋದ್ಯಾನ ಪುಷ್ಪಗಳನ್ನು ಲಿಂಗಕ್ಕೆ ಧರಿಸಬಾರದು. ಅನ್ಯಪೂಜೆಗೆ ಅರ್ಥವಾದ ಕುಸುಮಗಳನ್ನು ಲಿಂಗಕ್ಕೆ ಅರ್ಪಿಸಬಾರದು. ಅನ್ಯರು ತಂದ ಹೂವು ಗಳು ಸಲ್ಲವು. ಬೇಡಿದ ಬೇಡಿ ತಂದ ಹೂವುಗಳನ್ನು ಲಿಂಗಕ್ಕೆ ಏರಿಸಬಾರದು. ಧೂಪ ದೀಪಗಳನ್ನು ಸಮರ್ಪಿಸಿದ ಬಳಿಕ ನಿವೇದಿಸಲು ವಿಲಂಬಿಸಬಾರದು. ಅಭಿಷೇಕಕ್ಕಾಗಿ ದಿವ್ಯ ದ್ರವ್ಯಗಳನ್ನು ಕಲಶದಲ್ಲಿ ಹಾಕಬೇಕು. ಏಲಕ್ಕಿ, ಬಾಳದಬೇರು, ಲವಂಗ, ಕಸ್ತೂರಿ, ಚಂದ್ರ (ಸಿಂದೂರ ಅಂದರೆ ಕೇಸರಿ ಬಣ್ಣದ ಪುಡಿ) ಈ ಅಯ್ದು ಚೂರ್ಣಗಳನ್ನು ಕಲಶದಲ್ಲಿ ಹಾಕಬೇಕು. ಸಿದ್ಧಾರ್ಥಗಳನ್ನು ಕುಂಕುಮ, ದೂರ್ವೆ, ಕುಷ್ಠ, ಚಂದನ, ಭಸ್ಮ, ಚಂದ್ರ, ಕುಸುಮಗಳನ್ನು ಪಾದ್ಯ ಪಾತ್ರೆಯಲ್ಲಿ ಹಾಕಬೇಕು. ಸಿದ್ಧಾರ್ಥಗಳನ್ನು ದರ್ಭೆಯ ಕುಡಿಗಳನ್ನು ಜವೆಗೋದಿ, ನೆಲ್ಲು, ಎಳ್ಳುಗಳನ್ನು ಚಂದನ – ಭಸ್ಮ – ಕುಸುಮಗಳನ್ನು ಅರ್ಘ್ಯ ಪಾತ್ರೆಯಲ್ಲಿ ಹಾಕಬೇಕು. ತ್ರಿಫಲ, ಪಚ್ಚಕರ್ಪೂರ, ಕುಷ್ಠ ಅಂದರೆ ಚಂಗಲಕೋಷ್ಠ, ಕೋಶೀರ, ಭಸ್ಮ, ಚಂದನ, ಪುಷ್ಪಗಳನ್ನು ಆಚಮನ ಪಾತ್ರೆಯಲ್ಲಿ ಹಾಕಬೇಕು. ಉಳಿದ ಪಾತ್ರೆಗಳಲ್ಲಿ ಭಸ್ಮ, ಚಂದನ, ಪುಷ್ಪ ಗಳನ್ನು ಹಾಕಬೇಕು. ಉಗುರು ಬೆಚ್ಚಗಿರುವ ನೀರನ್ನು ತ್ಯಾಗಪಾತ್ರೆಯಲ್ಲಿ ಚಂದನೋದಕವನ್ನು ಜ್ಞಾನಪಾತ್ರೆಯಲ್ಲಿ, ಶೀತೋದಕವನ್ನು ಆನಂದ ನಾಮಕ ಪಾತ್ರೆಯಲ್ಲಿ ತುಂಬಬೇಕು.

ಎರಡು ಕಣ್ಣುಗಳ ಎವೆಗಳನ್ನು ಮುಚ್ಚಿ ಚೆನ್ನಾಗಿ ಧ್ಯಾನವನ್ನಾಚರಿಸಬೇಕು. ಧ್ಯಾನಕಾಲದಲ್ಲಿ ಪುರಾಣಾಗಮಾದಿಗಳ ಶ್ರವಣವನ್ನು ಮಾಡಬಾರದು. ಏಕಾಂತದಲ್ಲಿ ಕಣ್ಣುಮುಚ್ಚಿ ಧ್ಯಾನಿಸಬೇಕು. ಅಭಿಷೇಕ ಕಾಲದಲ್ಲಿ ಪುರಾಣಾದಿ ಶ್ರವಣ; ಬೇರೆ ವೇಳೆಯಲ್ಲಿ ಅಲ್ಲ. ಮನೋದಾರ್ಢ್ಯದಿಂದ ದೃಢವ್ರತನಾಗಿ ಲಿಂಗಪೂಜೆಯನ್ನೆಸಗಬೇಕು.

ಅಲಂಕಾರ ಪ್ರಿಯನು ವಿಷ್ಣು, ಅಭಿಷೇಕ ಪ್ರಿಯನು ಶಿವನು; ನಮಸ್ಕಾರ ಪ್ರಿಯನು ಭಾನು; ಸ್ತೋತ್ರಪ್ರಿಯರು ಶಿವಗಣರು. ಸ್ತೋತ್ರ ಪಾಠವು ವಿಶೇಷವಾಗಿ ಶಿವನಿಗೆ ಪ್ರಿಯಕಾರಿಯಾದುದು. ಸ್ತೋತ್ರದಿಂದ ಸಂತುಷ್ಟನಾದ ಶಿವನು ಇಷ್ಟಫಲಗಳನ್ನೀಯುವನು. ಧ್ಯಾನದಿಂದ ಪಾಪವೆಲ್ಲ ಪರಿಹಾರ. ಧ್ಯಾನಾನುಗುಣವಾಗಿ ಫಲ. ಧ್ಯಾನ ಎಲ್ಲಕ್ಕಿಂತ ಮುಖ್ಯ. ಪೂಜೆಗೆ ಸುಗಂಧ ದ್ರವ್ಯಗಳು ಎಷ್ಟಿದ್ದರೆ ಅಷ್ಟು ಚನ್ನ; ಪುಷ್ಟಿ ತುಷ್ಟಿ ಕಾರಣ, ಸುಗಂಧ ಸಾಮಗ್ರಿಯನ್ನನುಸರಿಸಿ ಫಲ. ಭಕ್ತರಿಗೆ ಕಿಲ್ಬಿಷವಿಲ್ಲ.

ಬಂಗಾರದ ಇಲ್ಲವೆ ಬೆಳ್ಳಿಯ ದೀಪಾರ್ತಿಯನ್ನು ಮಾಡಿ ಪುಷ್ಪದೊಡನೆ ಭಕ್ತನು ಅರ್ಪಿಸಿದಲ್ಲಿ ವಿಜ್ಞಾನ ಸಿದ್ಧಿಯಾಗುತ್ತದೆ. ದೀಪಾರಾಧನದಿಂದ ಜ್ಞಾನ ಸಿದ್ಧಿ. ವಿಶೇಷವಾಗಿ ಸೋಮವಾರ ದೀಪದರ್ಶನ ಮಾಡಿಸಬೇಕು. ಕಾರ್ತಿಕ ಸೋಮವಾರ ದೀಪಾವಲಿ ಅರ್ಪಣದಿಂದ ಪುನರ್ಜನ್ಮವುಂಟಾಗದು; ಭಕ್ತನಿಗೆ ಶಿವಸಾಯುಜ್ಯವೊದಗುತ್ತದೆ. ಸೋಮವಾರ ಪ್ರದೋಷ ಕಾಲದಲ್ಲಿ ಲಕ್ಷ ದೀಪಾರಾಧನವನ್ನು ಮಾಡಿದಲ್ಲಿ ಆಗುವ ಫಲ ಮಾತಿಗೆ ಮೀರಿದುದು; ಶಿವ ಸ್ವರೂಪವೆ ಲಭಿಸುತ್ತದೆ.

> "ಕರಪೀಠೇ ಸಮಭ್ಯರ್ಚ್ಯ ಸಾಂಬಂ ಮಾಂ ಲಿಂಗರೂಪಿಣಂ
> ಅಥ ಭಕ್ತೋ ನಮಸ್ಕಾರಂ ಕಂಠೋರ್ಧ್ವಂ ತು ವಿಭಾವಯೇತ್ ।"

ಇಷ್ಟಲಿಂಗವನ್ನು ಕರಪೀಠದಲ್ಲಿ ಅರ್ಚಿಸಿ, ಭಕ್ತನು ಕಂಠೋರ್ಧ್ವದಿಂದ ನಮಸ್ಕರಿಸುತ್ತ ವಿಭಾಗಿಸುವುದು. ಎಂಟು ನೂರೆಂಟು ಸಾವಿರ ಇವುಗಳಲ್ಲಿ ಎಷ್ಟಾದರೂ ಸಲ ನಮಸ್ಕರಿಸುವುದು. ಮುಕ್ತಾಂಗುಷ್ಠವುಳ್ಳ ಮುಷ್ಟಿಯಿಂದ ಪ್ರದಕ್ಷಿಣ ವಿಧಾನವನ್ನಾಚರಿಸುವುದು. ಪ್ರಾರ್ಥನೆಯನ್ನು ಸಲ್ಲಿಸುವುದು. ಉನ್ಮನೀಮುದ್ರೆಯಿಂದ ಕೂಡಿದ ಕರಕಮಲವುಳ್ಳವನಾಗಿ ಚಿನ್ಮುದ್ರೆಯಿಂದ ಪತ್ರ

ಪುಷ್ಪಗಳನ್ನು ಲಿಂಗಕ್ಕೆ ಸಮರ್ಪಿಸಬೇಕು. ಛತ್ರಿಯನ್ನು ಹಿಡಿಯಬೇಕು. ಚಾಮರವನ್ನು ಬೀಸಬೇಕು. ದರ್ಪಣವನ್ನು ತೋರಬೇಕು. ಗಂಟೆಯನ್ನು ಬಾಜಿಸಬೇಕು. ಶಂಖವನ್ನೂದಬೇಕು. ಗೀತಗಳನ್ನು ಹಾಡಬೇಕು. ವಾದ್ಯ ನೃತ್ಯಗಳನ್ನು ಅರ್ಪಿಸಬೇಕು. ಶಿವಪೂಜಾಗೃಹ ಶುದ್ಧವಾಗಿರಬೇಕು. ಸುಣ್ಣ ಬಳಿದು, ಸಗಣಿಯಿಂದ ಸಾರಿಸಿ, ರಂಗವಲ್ಲಿಯನ್ನಿಕ್ಕಿ ಅಲಂಕರಿಸಿರಬೇಕು. ತಳಿರು ತೋರಣಗಳಿಂದ ಹೂವುಗಳಿಂದ ಶೋಭಿಸುವಂತೆಸಗಬೇಕು. ಸುಗಂಧ ದ್ರವ್ಯ ಚೂರ್ಣಗಳನ್ನು ಚಲ್ಲಾಡಿರಬೇಕು. ಧೂಪದ ಹೊಗೆ ಹಾಕಬೇಕು. ಬಣ್ಣ ಬಣ್ಣಗಳ ಭಾವಚಿತ್ರಗಳನ್ನು ಹಾಕಿರಬೇಕು. ಶಿವ ವಿಗ್ರಹಗಳನ್ನಿರಿಸಿರಬೇಕು. ಗೂಡು ಮಾಡುಗಳಲ್ಲಿ ವಿಭೂತಿ ರುದ್ರಾಕ್ಷಿಗಳನ್ನು ಪೂಜಾ ಸಾಮಗ್ರಿಗಳನ್ನು ಇಟ್ಟಿರಬೇಕು. ಅಂತಹ ಪೂಜಾಗೃಹದಲ್ಲಿ ಶುಭಾಸನದಲ್ಲಿ ಸುಖಾಸೀನನಾಗಿ ಭಸ್ಮ ತ್ರಿಪುಂಡ್ರವನ್ನು ರುದ್ರಾಕ್ಷ ಮಾಲಿಕೆಯನ್ನು ಧರಿಸಿಕೊಳ್ಳಬೇಕು. ಕರಪೀಠಕ್ಕೆ ಇಷ್ಟಲಿಂಗವನ್ನು ಬರಮಾಡಿ ಮೂವತ್ತಾರು ಉಪಚಾರಗಳಿಂದ ಚತುರ್ವೇದ ಮಂತ್ರಗಳಿಂದ ಆಗಮೋಪನಿಷತ್ಪುರಾಣ ಮಂತ್ರಗಳಿಂದ ಗದ್ಯ ಪದ್ಯ ಸ್ತೋತ್ರಗಳಿಂದ ಸ್ತುತಿಸಬೇಕು; ಸ್ತುತಿಸಲು ಹಚ್ಚಬೇಕು. ಅವುಗಳಲ್ಲಿ ಶಿವಲಿಂಗ ಮಹಾತ್ಮ್ಯವಿರಬೇಕು. ಗಂಟೆ ಜಾಗಟೆ ಶಂಖಗಳ ನಾದ ಮೊಳಗಬೇಕು. ಶಬ್ದ ಬ್ರಹ್ಮಾನಂದಮಯವಾಗಿರಬೇಕು. ಶಿವಾನಂದಾಮೃತ ತೃಪ್ತನಾಗಿರಬೇಕು. ದಿನಕ್ಕೆ ಒಮ್ಮೆಯಾಗಲಿ, ಇಮ್ಮೆಯಾಗಲಿ, ಮುಮ್ಮೆಯಾಗಲಿ ಪೂಜಿಸುವಾತನು ಧನ್ಯನು, ಸರ್ವಲೋಕ ವಂದ್ಯನು; ಭಕ್ತರಲ್ಲಿ ಉತ್ತಮೋತ್ತಮನು, ಆತನನ್ನು ಧರ್ಶಿಸಿದವರೂ ಧನ್ಯರು. ಕಂಡು ಆನಂದಿಸಿದವರು ಆತನಿಗಿಂತಲೂ ಅಧಿಕರು.

ಯಾರು ತಂತಮ್ಮ ಮನೆಗಳಲ್ಲಿ ಮೇಲೆ ಹೇಳಿದ ಎಲ್ಲ ಶಿವಪೂಜಾ ಸಾಹಿತ್ಯವನ್ನಿತ್ತು ಲಿಂಗಾರ್ಚನವನ್ನು ಮಾಡಿಸುವರೋ ಅವರೂ ಧನ್ಯರು, ಶಿವಸಾಯುಜ್ಯವನ್ನು ಹೊಂದುವರು. ಜ್ಞಾನಿಗಳಿಗೂ ದುರ್ಲಭವಾದುದು ಸಾಯುಜ್ಯವದು.

ಈ ವಿಧಾನ ಅಚ್ಚರಿಯನ್ನುಂಟುಮಾಡುತ್ತದೆ. ಅಂದೆ ಆ ಅನಾದಿ ವೀರಶೈವವಾದ ಮಹಾಪಶುಪತದ ಕಾಲದಲ್ಲಿಯೆ ಇಷ್ಟೊಂದು ಇಷ್ಟಲಿಂಗ

ಪೂಜಾ ವಿಧಾನ ವಿಸ್ತೃತಗೊಂಡುದು ವಿಸ್ಮಯಕಾರಿಯಲ್ಲವೆ ? ಅರ್ಚನಾನುಭವ ಅಳವಟ್ಟುದು ಅಚ್ಚರಿಯಲ್ಲವೆ ?

— ೬ —

ಗಿರಿಜೆ ಅವಸರ ಪೂಜಾ ಕಲ್ಪವನ್ನು ಅಂದರೆ ಸಂಕ್ಷಿಪ್ತ ಪೂಜಾ ವಿಧಿಯನ್ನು ಬೆಸಗೊಳ್ಳುವಳು. ಗಿರೀಶನು ಹೀಗೆ ಹೇಳುವನು :

ಮೊದಲು ಲಿಂಗಪೂಜೆಗೆ ಮಂಡಲವನ್ನು ರಚಿಸಿ, ದೀಪವನ್ನು ಪ್ರಜ್ವಲಿಸಿ, ಗಣರ ಆಜ್ಞೆಯನ್ನು ಗ್ರಹಿಸಿ, ಗಂಟಾನಾದದೊಡನೆ ಶಿವನಾಮವನ್ನುಚ್ಚರಿಸುತ್ತ ಆಚಮನ ಮಾಡಿ ಶಕ್ತಿಗನುಸರಿಸಿ ಪ್ರಾಣಾಯಾಮವೆಸಗಿ,

"ಸಂಕೀರ್ತ್ಯ ದೇಶಕಾಲೌ ಚ ಕಲಶಂ ಸಮ್ಯಗರ್ಚಯೇತ್<br>
ಅಷ್ಟೋತ್ತರ ಶತಾನ್ಯೂನಂ ಜಪೇನ್ಮನು ಷಡಕ್ಷರೀಂ ।<br>
ಸರ್ವಲಿಂಗಂ ಸ್ಥಾಪಯತೀತಿ ಲಿಂಗಂ ವಿನ್ಯಸೇತ್ಕರೇ<br>
ನೀರಾಜನಂ ದರ್ಶನಾಖ್ಯಮಸೌ ಯ ಇತಿ ದರ್ಶಯೇತ್ ॥"

ದೇಶಕಾಲಗಳನ್ನು ಸಂಕೀರ್ತಿಸಿ, ಕಲಶಾರ್ಚನವನ್ನೆಸಗಿ, ಶಿವಷಡಕ್ಷರಿಯನ್ನು ನೂರೆಂಟು ಸಲ ಜಪಿಸಬೇಕು. ಬಳಿಕ "ಸರ್ವಲಿಂಗಂ ಸ್ಥಾಪಯತಿ" ಎಂದುಚ್ಚರಿಸುತ್ತ ಇಷ್ಟಲಿಂಗವನ್ನು ಕರಸ್ಥಲದಲ್ಲಿ ವಿನ್ಯಸಿಸಬೇಕು. ನೀರಾಜನ ದೀಪವನ್ನು ಬೆಳಗಬೇಕು. ತನ್ನನ್ನೆ ಲಿಂಗದಲ್ಲಿ ದರ್ಶಿಸಬೇಕು. "ಯೋ ವೈ ರುದ್ರಃ ಸ ಭಗವಾನ್...." ಎಂದು ಮನನಿಸಿ, ಪಾದ್ಯ ಅರ್ಘ್ಯ ಆಚಮನಗಳಿಂದ ಮಜ್ಜನ ಮಾಡಿ, ಆ ಲಿಂಗ ತೀರ್ಥ (ಅಭಿಷೇಕೋದಕ)ವನ್ನು ಶಿರಸ್ಸಿನಲ್ಲಿ ಪ್ರೋಕ್ಷಿಸಿಕೊಂಡು "ಋತಂ ಸತ್ಯಂ" ಎಂದು ಸ್ವೀಕರಿಸಿ ವಸ್ತ್ರದಿಂದ ದ್ರವ ತೆಗೆದು ಭಸ್ಮಧಾರಣ ಮಾಡಿ, ಗಂಧಾಕ್ಷತವಿಟ್ಟು ಪತ್ರ ಪುಷ್ಪಗಳನ್ನು ಅಲಂಕರಿಸಿ,

"ಮಹಾನೀರಾಜನಂ ದದ್ಯಾನ್ನ ತತ್ರೇತಿ ಮನುಂ ಸ್ಮರನ್<br>
ದದ್ಯಾದವಸರಂ ನೈವೇದ್ಯಮಾಚಾರಾದಿಲಿಂಗಕೈಃ ।"

ಮಹಾನೀರಾಜನವನ್ನೆತ್ತಿ, ಮಂತ್ರಸ್ಮರಣೆಯೊಡನೆ ಆಚಾರಲಿಂಗ–ಗುರುಲಿಂಗ–ಶಿವಲಿಂಗಾದಿ ಆರು ಲಿಂಗಗಳಿಗೆ ನೈವೇದ್ಯವನ್ನರ್ಪಿಸಿ, ಮಂತ್ರಪುಷ್ಪವನ್ನು ಸಮರ್ಪಿಸಬೇಕು.

"ಅಣೋರಣೀಯಾನಿತಿ ಚ ಲಿಂಗಂ ಸ್ವಾಂಗೇ ನಿವೇಶಯೇತ್ ।"

ಚುಳುಕಾಗಿ ಅಂಗೈಗೆ ಬಂದಿರುವನೆಂದು ಬಗೆದು ಅಂಗೈ ಲಿಂಗವನ್ನು ಅಂಗದಲ್ಲಿ ಅಂದರೆ ಎದೆಯ ಸಜ್ಜೆಯಲ್ಲಿ ಇರಿಸಿಕೊಳ್ಳಬೇಕು. ಇದು ಮೊತ್ತ ಮೊದಲು ಮಾಡುವ ಲಘು ಪೂಜೆ.

ಮತ್ತೆ ಮೊದಲಿನಂತೆ ವಿಧಿಯನ್ನಾಚರಿಸಿ,

"ಸಂಭವದ್ಭಿರಿಹ ದ್ರವ್ಯೈರಿಷ್ಟಲಿಂಗಸ್ಯ ಪೂಜನಂ ।
ಕರಿಷ್ಯ ಇತಿ ಸಂಕಲ್ಪ್ಯ...."

ಷಡಕ್ಷರ ಮಂತ್ರ ಜಪವನ್ನು ನೂರೆಂಟುಸಲ ಮಾಡಿ, ಕರಸ್ಥಲಕ್ಕೆ ಇಷ್ಟ ಲಿಂಗವನ್ನು ಬರಮಾಡಿಕೊಂಡು "ಇಷ್ಟಲಿಂಗಂ ಕರೇಧೃತ್ವಾ" "ಸರ್ವಲಿಂಗ ಮನುಂ ಪಠನ್" "ಯೋವೈ ರುದ್ರಃ ಸ ಭಗವಾನ್" ಈ ಮಂತ್ರಗಳ ಮನನ ದೊಡನೆ ಪಾದ್ಯಾದಿ ಅಭಿಷೇಕವನ್ನು ಮಾಡುವುದು. "ರುದ್ರಾಧ್ಯಾಯೇನಾಭಿ ಷೇಕಮಾವಹಂತೀತಿ ಮಂತ್ರತಃ" ರುದ್ರಾಧ್ಯಯನ ಮುಗಿಸಿ, ತೇವ ತೆಗೆದು, ಧೂಪಹಾಕಿ, ಆ ಆ ಮಂತ್ರಗಳಿಂದ ಭಸ್ಮ ಗಂಧಾದಿಗಳನ್ನು ಧರಿಸಿ, ಪತ್ರ ಪುಷ್ಪಾದಿಗಳನ್ನು ಅಲಂಕರಿಸಿ, ಛತ್ರ ಚಾಮರ ಸಮರ್ಪಿಸಿ, ವ್ಯಜನ–ದರ್ಪಣ ತೋರಿಸಿ, ಧೂಪಹಾಕಿ–ದೀಪ ಬೆಳಗಿ, ನೂರೆಂಟುಸಲ ಮಂತ್ರವನ್ನು ಜಪಿಸಿ, ಗಂಟಾನಾದವನ್ನೆಸಗಿ–ಶಂಖನಾದವನ್ನು ಮಾಡಿ, ಗೀತಗಳನ್ನು ಪಠಿಸಿ, ಸ್ತುತಿಸಿ, ಪ್ರದಕ್ಷಿಣ ನಮಸ್ಕಾರಗಳನರ್ಪಿಸಿ,

"ಅಘೋರೇಭ್ಯೋಽಥ ಇತಿ ಚಾಚಾರಲಿಂಗಾದಿಭಿಃ ಕ್ರಮಾತ್
ಚತುರ್ವಿಧಂ ಚ ನೈವೇದ್ಯಮರ್ಪಯೇತ್ಸಾಧಕಸ್ತತಃ ।
ಭಸ್ಮಾಭ್ಯುಂಕ್ಷ್ಯ ಮಹಾಲಿಂಗೇ ಈಶಾನ ಇತಿ ಮಂತ್ರತಃ
ಮೂಲಮಂತ್ರೇಣ ಚಾಪ್ಯೇವಂ ಮಂತ್ರಪುಷ್ಪಂ ಸಮರ್ಪಯೇತ್ ॥
ಯತೋ ವಾಚೋ ನಿವರ್ತಂತ ಇತಿ ಮಂತ್ರಂ ಪಠನ್ನಪಿ
ಆನಂದಾಭಿಖ್ಯಕಂ ನೀರಾಜನಮುಪ್ಯರ್ಪಯೇತ್ತತಃ ।....
ಅಣೋರಣೀಯಾನಿತಿ ಚ ಕುರ್ಯಾತ್ಸ್ವಾಂಗೇ ನಿವೇಶನಂ ॥"

ಇಲ್ಲಿ ಉಪಯೋಗಿಸಿದ 'ಆಚಾರಲಿಂಗಾದಿಭಿಃ' 'ಮಹಾಲಿಂಗೇ' ಪದಗಳ ವಿವರಣವೇ ಏಳನೆಯ ಪಟಲ ಪ್ರತಿಪಾದನೆಯಾಗಿದೆ.

— ೭ —

ಇಲ್ಲಿ ಷಟ್‌ಸ್ಥಲ ಪೂಜಾವಿಧಾನ ಮತ್ತು ಷಡ್ಲಿಂಗಾರ್ಪಣ ವಿಧಾನಗಳು ವಿವರಣಗೊಂಡಿವೆ.

ಈ ವೊದಲು ಹೇಳಿದಂತೆ ಶಿವಪೂಜಾ ಸಾಮಗ್ರಿಯನ್ನು ಸಜ್ಜುಗೊಳಿಸಿಕೊಂಡು,

"ಗುರುಮಭ್ಯರ್ಚ್ಯ ನಿಯತಂ ಯಸ್ಯ ದೇವೇತಿ ಮಂತ್ರತಃ
ತೀರ್ಥ ಪ್ರಸಾದೌ ಗೃಹ್ಣೀಯಾನ್ಮತ್ರೂಪೂಜಾಯೋಗ್ಯತಾಪ್ತಯೇ ।
ಇತಿ ಭಕ್ತಸ್ಥಲಂ ಪ್ರೋಕ್ತಮಥ ಮಾಹೇಶ್ವರಸ್ಥಲೇ
ಆಯಂ ಮೇ ಹಸ್ತ ಇತಿ ತು ಹಸ್ತ ಶುದ್ಧಿಂ ವಿಧಾಯ ವೈ ॥"

ಆರಾಧಕನು ವೊದಲು ತನ್ನ ನಿಯತನಾದ ಅಂದರೆ ನಿಶ್ಚಿತನಾದ ಗುರುವನ್ನು "ಯಸ್ಯ ದೇವೇತಿ" ಮಂತ್ರದಿಂದ ಅರ್ಚಿಸಿ ಪಾದೋದಕ ಪ್ರಸಾದಗಳನ್ನು ಸ್ವೀಕರಿಸಬೇಕು. ಇದುವೆ ಭಕ್ತಸ್ಥಲ. ಇದರಿಂದ ಲಿಂಗಪೂಜೆಗೆ ಯೋಗ್ಯತೆಯುಂಟಾಗುತ್ತದೆ. ಬಳಿಕ ಮಾಹೇಶ್ವರ ಸ್ಥಲದಲ್ಲಿ "ಅಯಂ ಮೇ ಹಸ್ತೋ ಭಗವಾನ್" ಎಂಬ ಮಂತ್ರದೊಡನೆ ತನ್ನ ಹಸ್ತ (ಕರಸ್ಥಲ) ಶುದ್ಧಿಯನ್ನು ಮಾಡಿ, ಸರ್ವಭೂತಸ್ಥವಾದ ಭಸ್ಮಾಸನವನ್ನೆಸಗಿ ಅಂದರೆ ಭಸ್ಮದಿಂದ ಮಂತ್ರವನ್ನು (ಓಂಕಾರವನ್ನು) ಲಿಖಿಸಿ, ಆ ಮಂತ್ರ ಭಸ್ಮಪೂತ ಕರಸ್ಥಲದಲ್ಲಿ "ವೇದಾಹಮೇತಂ ಪುರುಷಂ ಮಹಂತಂ" ಎಂಬ ಮಂತ್ರದಿಂದ ಇಷ್ಟಲಿಂಗವನ್ನಿರಿಸಿ, "ಸರ್ವಲಿಂಗಂ ಸ್ಥಾಪಯತಿ" ಎಂಬ ಮಂತ್ರದಿಂದ ತನ್ನ ಅಂತರಂಗದಲ್ಲಿರುವ ಉಳಿದೆಲ್ಲ ಲಿಂಗಗಳನ್ನು ಇಷ್ಟಲಿಂಗದಲ್ಲಿ ಪರಿಭಾವಿಸಿ ಹುದುಗಿಟ್ಟ ಹಣದಂತೆ ನಿಕ್ಷೇಪಿಸಬೇಕು. ಮತ್ತು ರುದ್ರನೆ ಲಿಂಗತತ್ತ್ವವೆಂದು ಭಾವಿಸಬೇಕು. ಬಳಿಕ ತನ್ನ ದೀಕ್ಷಾ ಗುರುವನ್ನು ಧ್ಯಾಸಿಸಿ, ಷಡಂಗನ್ಯಾಸವನ್ನು ಚನ್ನಾಗಿ ಮಾಡಿ, ಷಡಕ್ಷರ ಮಂತ್ರವನ್ನು ಸಾವಿರಾಗಲಿ ಆರುನೂರಾಗಲಿ ಜಪಿಸಬೇಕು. ಆಗ ಪ್ರಸಾದಿಸ್ಥಲ ಪ್ರಾಪ್ತಿಸುತ್ತದೆ.

"ಪ್ರಸಾದಿ ಸಂಜ್ಞಕೇ ಪಶ್ಚಾತ್ ಸ್ಥಲೇ ಲಿಂಗೇ ಚ ಭಸ್ಮ ವೈ
ಅಭ್ಯುಂಕ್ಷ್ಯ ನಾನುಧ್ಯಾಯೇಚ್ಚ ತಮೇವೈಕಮಿತಿ ಸ್ಮರನ್ ।

ದಶಾವಧಾನವಿಧಿನಾ ನಿರೀಕ್ಷ್ಯ ಸ್ವೇಷ್ಟಲಿಂಗಕಂ
ನೀರಾಜನಂ ಸಾನುರಾಗಂ ಯಾ ತೇ ರುದ್ರೇತಿ ನಿರ್ದಿಶೇತ್ ॥"

ಬಳಿಕ ಆ ಪ್ರಸಾದಿಸ್ಥಲದಲ್ಲಿದ್ದು ಲಿಂಗದಲ್ಲಿದ್ದು ಭಸ್ಮವನ್ನು ಅಭ್ಯಂಕ್ಷಿಸಿ, ತನ್ನನ್ನು ನೆನೆಯದೆ ಅಂದರೆ ಅಂಗವೆಂಬ ಭಾವವಿರದೆ ಲಿಂಗವೇ ತಾನೆಂಬ ಏಕೋಭಾವವನ್ನು ತಳೆದು ದಶಾವಧಾನವಿಧಿಯಿಂದ ಅಂದರೆ ಹತ್ತಿಂದ್ರಿಯ ಸಂಯಮನದಿಂದ ತನ್ನ ಇಷ್ಟಲಿಂಗವನ್ನು ನಿಟ್ಟಿಸಿ, "ಯಾತ್ರೇ ರುದ್ರ ಶಿವಾ ತನೂ...." ಎಂಬ ಮಂತ್ರದೊಡನೆ ಅನುರಾಗ(ಭಕ್ತಿ)ದಿಂದ ನೀರಾಜನವನ್ನು ನಿರ್ದೇಶಿಸಬೇಕು. ಆಗ ಪ್ರಾಣಲಿಂಗಸ್ಥಲ ಪ್ರಾಪ್ತಿಸುತ್ತದೆ.

"ಪ್ರಾಣಲಿಂಗಿಸ್ಥಲೇ ಭಸ್ಮ ಲಿಂಗೋಪರಿ ನಿಧಾಯ ಚ
ಮೂಲೇನೈವ ಹಿ ಲಿಂಗಾಗ್ರೇ ಪುಷ್ಪಂ ನಿಕ್ಷಿಪ್ಯ ಮಂತ್ರಿತಂ ।
ನೀರಾಜನಂ ದರ್ಶನಾಖ್ಯಮಸೌ ಯ ಇತಿ ದರ್ಶಯೇತ್ ।"

ಪ್ರಾಣಲಿಂಗಸ್ಥಲಿಯಾದ ಪೂಜಕನು ಲಿಂಗದ ಮೇಲೆ ಭಸ್ಮವನ್ನು ಧರಿಸಿ, ಮೂಲ ಮಂತ್ರೋಚ್ಚಾರದೊಡನೆ ಲೀಗದ ಮೇಲೆ ಮಂತ್ರಿತ ಪುಷ್ಪವನ್ನಿರಿಸಿ ನೀರಾಜನವನ್ನು ದರ್ಶಿಸಬೇಕು. ಬಳಿಕ ಆ ಆ ಪಾತ್ರಗಳಲ್ಲಿರುವ ಪಾದ್ಯ ಅರ್ಘ್ಯ ಆಚಮನಗಳನ್ನು ಅಭಿಷೇಕಿಸಿ ತ್ಯಾಗಪಾತ್ರೆಯಲ್ಲಿರುವ ಮಂತ್ರೋದಕದಿಂದ ಲಿಂಗಕ್ಕೆ ಮಜ್ಜನ ಮಾಡಬೇಕು. ಆ ಮಜ್ಜನೋದಕವನ್ನು ಆಧಾರ ಪಾತ್ರೆ ಯಿಂದೆತ್ತಿಕೊಂಡು ತಲೆಯ ಮೇಲೆ ಪ್ರೋಕ್ಷಿಸಿಕೊಳ್ಳಬೇಕು. ವಸ್ತ್ರದಿಂದ ತೇವ ವನ್ನು ತೆಗೆದು ತಾನು ಪದ್ಮಾಸನದಲ್ಲಿ ಕುಳಿತು ಪಾದಗಳನ್ನು ಭಸ್ಮಾಸನದಲ್ಲಿರಿಸಿ ಲಿಂಗವನ್ನು ಭಾವಿಸಬೇಕು. ಲಿಂಗವನ್ನು ಗಂಧಾದಿಗಳಿಂದ ಅಲಂಕರಿಸಬೇಕು. ದಶಾಂಗಸಹಿತ ಧೂಪವನ್ನು ಹಾಕಬೇಕು; ಉದ್ದೀಪಿಸಬೇಕು. ಛತ್ರ ಹಿಡಿದು, ಚಾಮರ ಬೀಸಿ, ದರ್ಪಣತೋರಿ, ಗಂಟೆಯ ಬಾಜಿಸಿ, ಗೀತವ ಹಾಡಿ, ಪ್ರದಕ್ಷಿಣ ನಮಸ್ಕಾರಗಳ ಮಾಡಿ, ನಿವೇದಿಸಿಕೊಂಡು ಪೂಜಾ ದ್ರವ್ಯಗಳಾದ ಪತ್ರ ಪುಷ್ಪಾದಿಗಳನ್ನು ಇಳುಹಬೇಕು. ಅಲ್ಲಿಗೆ ಶರಣಸ್ಥಲ ಸಂಪನ್ನನಾಗು ತ್ತಾನೆ.

"ಶರಣಾಖ್ಯಸ್ಥಲೇ ಭೋಜ್ಯಪದಾರ್ಥೇಷ್ವಗ್ನಿರಿತ್ಯತಃ
ವಿಕೀರ್ಯ ಸಜಲಂ ಭಸ್ಮ ಸವ್ಯಾಹೃತಿಕಯಾ ತಥಾ ।

ಸಾವಿತ್ರ್ಯಾ ರುದ್ರಗಾಯತ್ರ್ಯಾ ಪರಿಷಿಚ್ಯೈವಮಂಬುಭಿಃ
ಸ್ವಾಹಾಂತೇಭ್ಯಸ್ತಥಾಚಾರ ಲಿಂಗಾದಿಭ್ಯೋಽರ್ಪಯೇತ್ತತಃ ।
ಷಡ್ಲಿಂಗಾರ್ಪಣ ಸದ್ಭಾವೇ ವಿಶೇಷೋಽಸ್ತಿ ಶ್ರುಣು ಪ್ರಿಯೇ ॥"

ಶರಣಸ್ಥಲದಲ್ಲಿದ್ದು ಭೋಜ್ಯ ಪದಾರ್ಥಗಳನ್ನು ಮಂತ್ರೋದಕ ಭಸ್ಮಗಳೊಡನೆ ರುದ್ರಗಾಯತ್ರಿಯಿಂದ ಆಚಾರಲಿಂಗಾದಿಗಳಿಗೆ ಅರ್ಪಿಸಬೇಕು. ಷಡ್ಲಿಂಗಾರ್ಪಣ ಸದ್ಭಾವದಲ್ಲಿ ವಿಶೇಷವಿದೆ.

ಆಚಾರಲಿಂಗಾರ್ಪಣ :

"ಭಕ್ತಸ್ಥಲೇ ಕ್ರಿಯಾಶಕ್ತಿಯುತೆ ವೈ ನಾಸಿಕಾಂಗಗೇ
ಆಚಾರಲಿಂಗ ಸಂಜ್ಞೇಽಸ್ಮಿನ್ ಸದ್ಯೋಜಾತಮುಖಾತ್ಮಕೇ ।
ಗಂಧಪ್ರಸಾದಂ ಸದ್ಭಕ್ತ್ಯಾ ಚಿತ್ತಹಸ್ತೇನ ಚಾರ್ಪಯೇತ್ ।"

ಭಕ್ತಸ್ಥಲದ ನಾಸಿಕಾಂಗದಲ್ಲಿರುವ ಕ್ರಿಯಾಶಕ್ತಿಯಿಂದ ಕೂಡಿದ ಆಚಾರಲಿಂಗದ ಸದ್ಯೋಜಾತ ಮುಖದಲ್ಲಿ ಸದ್ಭಕ್ತಿಯಿಂದ ಚಿತ್ತ ಹಸ್ತದಿಂದ ಗಂಧ ಪ್ರಸಾದವನ್ನು ಅರ್ಪಿಸಬೇಕು.

ಗುರುಲಿಂಗಾರ್ಪಣ :

"ಮಾಹೇಶ್ವರಸ್ಥಲೇ ಜ್ಞಾನಶಕ್ತಿಕೇ ರಸನಾಂಗಗೇ
ಗುರುಲಿಂಗಾಭಿಧೇ ವಾಮದೇವವಕ್ತ್ರೇ ವಿಶೇಷತಃ
ಬುದ್ಧಿಹಸ್ತೇನ ತು ರುಚಿಂ ನಿಷ್ಠಾಭಕ್ತ್ಯಾ ಸಮರ್ಪಯೇತ್ ।"

ಮಾಹೇಶಸ್ಥಲದ ರಸನಾಂಗದಲ್ಲಿರುವ ಜ್ಞಾನಶಕ್ತಿಯುಕ್ತ ಗುರುಲಿಂಗದ ವಾಮದೇವ ಮುಖಕ್ಕೆ ವಿಶೇಷವಾಗಿ ನಿಷ್ಠಾಭಕ್ತಿಯಿಂದ ಬುದ್ಧಿಹಸ್ತದಿಂದ ರುಚಿ ಪ್ರಸಾದವನ್ನು ಸಮರ್ಪಿಸುವುದು.

ಶಿವಲಿಂಗಾರ್ಪಣ :

"ಸ್ಥಲೇ ಪ್ರಸಾದಿಸಂಜ್ಞೇಽಸ್ಮಿನ್ನಿಚ್ಛಾಶಕ್ತಿ ಸಮನ್ವಿತೇ
ದೃಗಂಗಕೇಽ ಘೋರಮುಖೇ ಶಿವಲಿಂಗಾಭಿಧೇ ಪುನಃ
ಭಕ್ತ್ಯಾಽವಧಾನಯಾ ರೂಪಮಹಂಕಾರೇಣ ಚಾರ್ಪಯೇತ್ ।"

ಪ್ರಸಾದಿ ಸ್ಥಲದ ದೃಗಂಗದಲ್ಲಿರುವ ಇಚ್ಛಾಶಕ್ತಿ ಸಂಪನ್ನ ಶಿವಲಿಂಗದ ಅಘೋರ ಮುಖದಲ್ಲಿ ಅವಧಾನ ಭಕ್ತಿಯಿಂದ ಅಹಂಕಾರ ಹಸ್ತದಿಂದ ರೂಪ ಪ್ರಸಾದವನ್ನು ಸಮರ್ಪಿಸುವುದು.

ಚರಲಿಂಗಾರ್ಪಣ :

"ಪ್ರಾಣಲಿಂಗಿಸ್ಥಲೇ ತ್ವಾದಿಶಕ್ತಿಯುಕ್ತೇ ತ್ವಗಂಗಗೇ
ಚರಲಿಂಗಾಭಿಧೇ ತತ್ಪುರುಷ ವಕ್ತ್ರೇ ದೃಢವ್ರತಃ
ಭಕ್ತ್ಯಾಽನುಭವಯಾ ಮನೋ ಹಸ್ತೇನ ಸ್ಪರ್ಶಮರ್ಪಯೇತ್ ।"

ಪ್ರಾಣಲಿಂಗಿಸ್ಥಲದ ತ್ವಗಂಗದಲ್ಲಿರುವ ಆದಿಶಕ್ತಿಯುಳ್ಳ ಚರಲಿಂಗದ ತತ್ಪುರಷ ಮುಖಕ್ಕೆ ಅನುಭವ ಭಕ್ತಿಯಿಂದ ಮನೋಹಸ್ತದಿಂದ ಸ್ಪರ್ಶಪ್ರಸಾದ ವನ್ನು ಸಮರ್ಪಿಸುವುದು.

ಪ್ರಸಾದಲಿಂಗಾರ್ಪಣ :

"ಶರಣಸ್ಥಲೇ ತು ಪರಯಾ ಶಕ್ತ್ಯಾ ಯುಕ್ತೇ ಶ್ರವೋಂಗಗೇ
ಪ್ರಸಾದಲಿಂಗೇ ತ್ವೀಶಾನಮುಖೇ ಶಬ್ದ ಪ್ರಸಾದಕಂ
ಆನಂದ ಭಕ್ತ್ಯಾ ಸುಜ್ಞಾನ ಹಸ್ತೇ ನೈವ ಸಮರ್ಪಯೇತ್ ।"

ಶರಣಸ್ಥಲದ ಶ್ರೋತ್ರಾಂಗದಲ್ಲಿರುವ ಪರಾಶಕ್ತಿಯಿಂದ ಕೂಡಿದ ಪ್ರಸಾದ ಲಿಂಗದ ಈಶಾನ ಮುಖದಲ್ಲಿ ಆನಂದಭಕ್ತಿಯಿಂದ ಸುಜ್ಞಾನ ಹಸ್ತದಿಂದ ಶಬ್ದ ಪ್ರಸಾದವನ್ನು ಸಮರ್ಪಿಸುವುದು.

ಮಹಾಲಿಂಗಾರ್ಪಣ :

"ಐಕ್ಯಸ್ಥಲೇ ತು ಚಿಚ್ಛಕ್ತಿಯುತೇ ವೈ ಮಾನಸಾಂಗಗೇ
ಮಹಾಲಿಂಗೇ ಪರಶಿವಮುಖೇ ಸಂಕಲ್ಪಮರ್ಪಯೇತ್
ಸದ್ಭಾವಾಭಿಖ್ಯಹಸ್ತೇನ ಭಕ್ತ್ಯಾ ಸಮರಸಾಖ್ಯಯಾ ।"

ಐಕ್ಯಸ್ಥಲದ ಮಾನಸಾಂಗದಲ್ಲಿರುವ ಚಿಚ್ಛಕ್ತಿಯಿಂದೊಡಗೂಡಿದ ಮಹಾ ಲಿಂಗದ ಪರಶಿವ ಮುಖಕ್ಕೆ ಸಮರಸ ಭಕ್ತಿಯಿಂದ ಸದ್ಭಾವ ಹಸ್ತದಿಂದ ಸಂಕಲ್ಪ (ಸಂತೃಪ್ತಿ) ಪ್ರಸಾದವನ್ನು ಸಮರ್ಪಿಸುವುದು.

"ಏವಮಂಗಂ ಚ ಲಿಂಗಂ ಚ ಭಕ್ತಿಂ ಶಕ್ತಿಂ ತಥಾ ಸ್ಥಲಂ
ಮುಖಂ ಹಸ್ತಂ ಪ್ರಸಾದಂ ಚ ಜ್ಞಾತ್ವಾ ವೈ ಸಮ್ಯಗರ್ಚಯೇತ್
ಏವಮರ್ಪಣ ಸದ್ಭಾವಂ ಸರ್ವದೈವ ಸಮಭ್ಯಸೇತ್ ।
ಸಮರ್ಪಣಂ ದ್ವಿಧಾ ಪ್ರೋಕ್ತಮರ್ಚಾಂಗಂ ಸಾರ್ವಕಾಲಿಕಂ
ಸಮರ್ಪಣೇ ಸಮರ್ಚಾಂಗೇ ರುಚಿಂ ಭಾವೇನ ನಾನ್ಯಥಾ ।
ಶರಣಾಖ್ಯಸ್ಥಲೇಽ ಪ್ಯೇವಮರ್ಪಣಂ ಷಟ್‌ಸ್ಥಲಾತ್ಮಕಂ
ಐಕ್ಯ ಸ್ಥಲೇ ತು ಮೂಲೇನ ಲಿಂಗೇ ಪುಷ್ಪಂ ನಿಧಾಯ ಚ ।
ಧೂಪಂ ಸಮರ್ಪ್ಯಚಾನಂದ ನೀರಾಜನಮಥಾರ್ಪಯೇತ್
ಯತೋ ವಾಚೋ ನಿವರ್ತಂತ ಇತಿ ಮಂತ್ರಂ ಜಪನ್ ಪುನಃ ॥"

ಷಟ್‌ಸ್ಥಲಾರ್ಚನ ಷಡ್ಲಿಂಗಾರ್ಪಣ ಆಚರಣೆಗೆ ಬೇಕಾದ ಅಷ್ಟ ಸಕೀಲಗಳ ನಿರೂಪಣ ಅನಾದಿ ವೀರಶೈವಕ್ಕೆ ಸೇರಿದುದು. ಅವು ಇಲ್ಲಿ ಹೀಗೆ ನಿರೂಪಣ ಗೊಂಡಿವೆ: ಅಂಗ-ಲಿಂಗ, ಭಕ್ತಿ-ಶಕ್ತಿ, ಹಸ್ತ-ಮುಖ, (ಪದಾರ್ಥ)ಪ್ರಸಾದ ಇವು ಎಂಟು ಸಕೀಲಗಳು. ಇವನರಿಯದೆ ಅರ್ಚನೆ ಘಟಿಸದು. "ಜ್ಞಾತ್ವಾ ವೈ ಸಮ್ಯಗರ್ಚಯೇತ್" ಎಂಬ ಸಲಹೆ ಸಂಸ್ಮರಣೀಯ. ಇಲ್ಲಿಯವರೆಗೆ ನಿರೂಪಿಸಿ ದುದು ಸಮರ್ಪಣ ಸದ್ಭಾವ! ಇದನ್ನು ಯಾವಾಗಲೂ ಚನ್ನಾಗಿ ಅಭ್ಯಸಿಸ ಬೇಕು. "ಸರ್ವದೇವ ಸಮಭ್ಯಸೇತ್"!

ಅರ್ಚಾಂಗವೆಂದು ಸಾರ್ವಕಾಲಿಕವೆಂದು ಸಮರ್ಪಣ ಇಬ್ಬಗೆ! ಅರ್ಚಾಂಗ ದಲ್ಲಿ ಸಮರ್ಪಣ ರುಚಿಭಾವದಿಂದ ಘಟಿಸುತ್ತಿದೆಯಲ್ಲದೆ ಬೇರೆ ಇಲ್ಲ.

ಶರಣಸ್ಥಲದಲ್ಲಿಯೂ ಅರ್ಪಣವಿಧಾನ ಷಟ್‌ಸ್ಥಲಾತ್ಮಕವಾದುದು. ಇನ್ನು ಕೊನೆಯದಾಗಿ ಐಕ್ಯಸ್ಥಲ ಪೂಜಾವಿಧಾನ ಮೂಲಮಂತ್ರ ಮಾತ್ರದಿಂದ ನಡೆಯುತ್ತದೆ. ಇಷ್ಟಲಿಂಗದ ಮೇಲೆ ಹೂವೊಂದನ್ನು ಇರಿಸಿ, ಧೂಪ ವನ್ನರ್ಪಿಸಿ, ಆನಂದ ನೀರಾಜನವನ್ನೆತ್ತಿ "ಯತೋ ವಾಚೋ ನಿವರ್ತಂತ ಅಪ್ರಾಪ್ಯ ಮನಸಾ ಸಹ।" ಎಂಬ ಮಂತ್ರವನ್ನು ಜಪಿಸಬೇಕು. "ಸವಿಶ್ವ ಕೃತ್"....! ಎಂಬುದನ್ನು ಪಠಿಸುತ್ತ ತಾಂಬೂಲವನ್ನು ಸಮರ್ಪಿಸಬೇಕು. ಮಂತ್ರಪುಷ್ಪಾರ್ಪಣವಾಗಬೇಕು. ಬಳಿಕ ಹೀಗೆ ಪೂಜೆಯನ್ನು ಪರಿಸಮಾಪ್ತಿ ಗೊಳಿಸಬೇಕು:

"ಸೋಽಬ್ರವೀದಿತಿ ಮಂತ್ರೇಣ ವಸ್ತ್ರೇಣಾವೃತ್ಯ ಲಿಂಗಕಂ
ಅಣೋರಣೀಯಾನಿತಿ ತು ಪೇಟಿಕಾಯಾಂ ಸುವಿನ್ಯಸೇತ್।
ಏವಂ ಮಹಾರ್ಚನಂ ಪ್ರೋಕ್ತಂ ಮಹಾದೇವಿ ಮಹಾ ಫಲಂ
ವಿಧಿನಾಽನೇನ ಸಂಪೂಜ್ಯ ನ ಪುನರ್ಜನ್ಮಭಾಗ್ಭವೇತ್ ॥"

"ಸೋಽಬ್ರವಿತ್" ಮಂತ್ರ ಪಠನದೊಡನೆ ಇಷ್ಟಲಿಂಗವನ್ನು ಹುದುಗ ಬಟ್ಟೆಯಲ್ಲಿರಿಸಿ "ಅಣೋರಣೀಯಾನ್" ಚುಳುಕಕ್ಕೆ ಚುಳುಕು ಎಂಬೀ ಅರ್ಥದ ಮಂತ್ರವನ್ನು ಪಠಿಸುತ್ತ ಇಷ್ಟಲಿಂಗವನ್ನು ಕರಡಿಗೆಯಲ್ಲಿರಿಸಬೇಕು. ಶಿವಾಗಮ ಕಾಲದಲ್ಲಿಯೆ ಕರಡಿಗೆಯ ಧಾರಣವಿದ್ದಿತೆಂಬುದನ್ನು ಗಮನಿಸಬೇಕು. ಲಿಂಗದ ಚುಳುಕು ಭಾವವೂ ಅಂದಿನದೆ ಆಗಿದೆ. ಲಿಂಗವನ್ನು ಹುದುಗದಲ್ಲಿರಿಸುವು ದಕ್ಕೂ ಮಂತ್ರಪಠನ ಬೇಕೆಂದು ಹೇಳುವ ಅಂದಿನ ಆ ಅನಾದಿಕಾಲದ ಅನಾದಿ ವೀರಶೈವದ ಅರ್ಚನ ವಿಧಾನದ ಎತ್ತರ ಮತ್ತು ಪರಿಪೂರ್ಣತೆ ಅರ್ಥವಾಗುತ್ತದೆ. ವೀರಶೈವ ವಿಧಾನ ಅಂದೇ ಎಲ್ಲ ಬಗೆಯಲ್ಲಿ ಪರಿಪೂರ್ಣವಾಗಿತ್ತು. ಯಾವ ಅರೆ ಕೊರೆಯಿಲ್ಲದಿತ್ತು.

ಇದನ್ನು ಮಹಾರ್ಚನವೆಂದು ಮಹಾಫಲದಾಯಕವೆಂದು ಇದರಿಂದ ಪುನ ರ್ಜನ್ಮವಿಲ್ಲೆಂದು ಹೇಳಲಾಗಿದೆ.

ಮಹಾಪೂಜೆಯಾದ ಬಳಿಕ ಗುರುಪೂಜೆ ಆಗಬೇಕು. ಇಲ್ಲವಾದರೆ ಲಿಂಗಪೂಜೆ ಫಲಿಸದು.

"ದೇವೇಶಿ ಗುರುಪೂಜಾಯಾಂ ವಿಶೇಷಃ ಕಥ್ಯತೇ ಶ್ರುಣು
ಪಾದ್ಯಾರ್ಘ್ಯಾಚಮನಾಖ್ಯಾನಿ ತ್ಯಾಗಜ್ಞಾನಾದಿಕಾನಿ ಚ
ನ ವಿದ್ಯಂತೇಽತ್ರ ಪಾತ್ರಾಣಿ ಪಾತ್ರದ್ವಿತಯ ಮೇವ ಚ।
ಶಿವಕುಂಭಂ ಚ ಸಾಮಾನ್ಯಮರ್ಘ್ಯಪಾತ್ರಂ ಚ ವಿದ್ಯತೇ
ಶಿಷ್ಟಂ ಸರ್ವಂ ಸಮಂ ಪ್ರೋಕ್ತಂ ಕಿಮತಃ ಶ್ರೋತುಮಿಚ್ಛಸಿ? ॥"

ಓ ದೇವಿ, ಲಿಂಗಪೂಜಾನಂತರ ಮಾಡುವ ಗುರುಪೂಜೆ ಅಂದರೆ ಗುರು ಪಾದ ಪೂಜೆ ವಿಶೇಷವಾಗಿದೆ. ಇದಕ್ಕೆ ಲಿಂಗಪೂಜೆಗೆ ಬೇಕಾದಷ್ಟು ಸಾಮಗ್ರಿ ಗಳು ಪಾತ್ರೆಗಳು ಬೇಕಾಗುವುದಿಲ್ಲ. ಒಂದು ಲೋಟ, ಉದ್ಧರಣೆ ಇದ್ದರೆ ಸಾಕು. ಬೇರೆ ಪಾತ್ರೆಗಳಾಗಲಿ ಪಾದ್ಯಾದಿಗಳಾಗಲಿ ಬೇಕಾಗುವುದಿಲ್ಲ.

ಉಳಿದ ಪತ್ರ ಪುಷ್ಪ ಗಂಧ ಅಕ್ಷತೆ ಧೂಪ ದೀಪಾದಿಗಳು ಬೇಕಾಗುತ್ತವೆ. ಈ ಪೂಜೆಯಿಂದ ಸರ್ವೋತ್ಕೃಷ್ಟವಾದ ಚಿನ್ಮಯವಾದ ಪಾದೋದ-ಪ್ರಸಾದಗಳು ಪ್ರಾಪ್ತಿಸುತ್ತವೆ. ಇದಕ್ಕಿಂತ ಫಲ ಪ್ರಾಪ್ತಿ ವೀರಶೈವರಿಗೆ ಬೇರೊಂದಿಲ್ಲ. ಇದುವೆ ಪರಮ ಪ್ರಾಪ್ತಿ.

— ೮ —

ಸರ್ವಾನುಗ್ರಹದಲ್ಲಿ ತತ್ಪರನಾದ ಜಗದೀಶ್ವರನೆ, ನೀವು ನಿರೂಪಿಸಿದ ವೀರಶೈವ ಪೂಜಾವಿಧಾನ ಉತ್ಕೃಷ್ಟವಾದುದು. ವೇದ ಮಂತ್ರ ಸಮನ್ವಿತವಾಗಿರುವುದರಿಂದ ವೇದಾಧಿಕಾರಿಗಳಿಗೆ ಚನ್ನಾಗಿ ಅನುಷ್ಠೇಯವಾದುದು. ಅದನ್ನು ನೀವು ಪ್ರಕಾಶಗೊಳಿಸಿದಿರಿ. ಇನ್ನು ಸ್ತ್ರೀಯರು ಯಾವ ವಿಧಾನದಿಂದ ಕೃತಾರ್ಥರಾಗುವರೆಂಬುದನ್ನು ಬೋಧಿಸುವುದೆಂದು ಭವಾನಿಯು ಕೇಳುವಳು. ಅದಕ್ಕೆ ಭವಹರನು ಹೀಗೆ ಹೇಳುವನು :

ಓ ಮಹಾದೇವಿ, ತಾಂತ್ರಿಕ (ಆಗಮಿಕ) ಪೂಜಾಕ್ರಮವನ್ನು ಹೇಳುವೆನು. ಅದರ ಅನುಷ್ಠಾನದಿಂದ ಸರ್ವರು (ಸ್ತ್ರೀ ಪುರುಷರು) ಸರ್ವಾರ್ಥಭಾಜನರಾಗುವರು. ತಾಂತ್ರಿಕ ಪೂಜೆ ವೈದಿಕ ಪೂಜೆಗಿಂತ ಕಡಿಮೆಯೇನಲ್ಲ; ಅವರಿವರೆಂಬುದಿಲ್ಲ.

"ವಿದ್ಯಾಸು ಶ್ರುತಿರುತ್ಕೃಷ್ಟಾ ರುದ್ರೈಕಾದಶಿನೀ ಶ್ರುತೌ
ತತ್ರ ಪಂಚಾಕ್ಷರಸ್ತತ್ರ ಶಿವ ಇತ್ಯಕ್ಷರದ್ವಯಂ ।...
ಮದೀಯ ಮೂಲ ಮಂತ್ರೇಣ ಪೂಜನಂ ಸರ್ವತೋ ವರಂ
ಅಥವಾ ತಾಂತ್ರಿಕೈರ್ಮಂತ್ರೈರಪಿ ಪೂಜಾ ವಿಶಿಷ್ಟತೇ ।....
ಭಕ್ತಿಲಭ್ಯೋಽಸ್ಮ್ಯಹಂ ಯಸ್ಮಾದಭಕ್ತ್ಯಾ ಪೂಜನಂ ವೃಥಾ
ತನ್ಮಂತ್ರಾಸ್ತಾಂತ್ರಿಕಾ ದೇವಿ ಪೂಜಾಯಾಮುತ್ತಮೋತ್ತಮಾಃ ॥
ಸರ್ವೇಷಾಮಧಿಕಾರೋಽಸ್ತಿ ತಾಂತ್ರಿಕೇಷು ವರಾನನೇ
ವೈದಿಕಾನಾಂ ತಥಾನ್ಯೇಷಾಂ ಸ್ತ್ರೀಣಾಂ ಪುಂಸಾಂ ಚ ಸುವ್ರತೇ ॥"

ವಿದ್ಯೆಗಳಲ್ಲಿ ಶ್ರುತಿ (ವೇದ) ಉತ್ತಮ. ಶ್ರುತಿಯಲ್ಲಿ ರುದ್ರೈಕಾದಶಿ ಅಂದರೆ ಏಕಾದಶ ರುದ್ರ ಉತ್ತಮ. ರುದ್ರೈಕಾದಶಿಯಲ್ಲಿ ಪಂಚಾಕ್ಷರ ಮಂತ್ರ ಉತ್ತಮ. ಪಂಚಾಕ್ಷರಮಂತ್ರದಲ್ಲಿ 'ಶಿವ' ಎಂಬೆರಡು ಅಕ್ಷರ ಉತ್ತಮ.

ಇವೆರಡು ಬೀಜಾಕ್ಷರ ! ಇದುವೆ ಮೂಲಮಂತ್ರ. ಇದನ್ನು ಪಠಿಸುತ್ತ ಮಾಡುವ ಪೂಜೆ ಸರ್ವಕ್ಕೂ ಉತ್ತಮ. ಇಲ್ಲವೆ ತಾಂತ್ರಿಕ (ಆಗಮಿಕ) ಮಂತ್ರಗಳಿಂದ ಮಾಡುವ ಪೂಜೆಯೂ ವಿಶೇಷ ! ಶಿವನು ಭಕ್ತಿ ಪ್ರಿಯನು, ಭಕ್ತಿ ಲಭ್ಯನು. ಭಕ್ತಿಯಿಂದ ಮಾಡುವ ಪೂಜೆಯೇ ಪೂಜೆ, ಭಕ್ತಿಯಿಲ್ಲದ ಪೂಜೆ ವ್ಯರ್ಥ. ಭಕ್ತಿ ಪೂಜೆಯಲ್ಲಿ ತಾಂತ್ರಿಕ ಮಂತ್ರಗಳು ಉತ್ತಮೋತ್ತಮ.

ಓ ಗಿರಿಜೆ, ತಾಂತ್ರಿಕ ಮಂತ್ರ ಪೂಜೆಗಳಲ್ಲಿ ವೈದಿಕರಿಗೂ ಅವೈದಿಕರಿಗೂ ಸ್ತ್ರೀ ಪುರುಷರಿಗೂ ಸರ್ವರಿಗೂ ಅಧಿಕಾರವಿರುತ್ತದೆ. ಇಲ್ಲಿ ಅವರಿವರೆಂಬ ಭೇದವಿಲ್ಲ ಇಲ್ಲಿ ಇರಬೇಕಾದ ಅರ್ಹತೆಯೆಂದರೆ ಭಕ್ತಿಯೊಂದೆ ! ಭಕ್ತಿಗೆ ಹೆಣ್ಣು ಗಂಡೆಂಬ ಭೇದವಿಲ್ಲ. ವೈದಿಕರು ಅವೈದಿಕರು ಎಂಬ ಭೇದವಿಲ್ಲ. "ವೈದಿಕೋಽಪಿ ಚ ಸಂಯುಕ್ತೈಸ್ತಾಂತ್ರಿಕೈರಪಿ ಪೂಜಯೇತ್ !" ವೈದಿಕನೂ ಸಹ ತಾಂತ್ರಿಕ ಮಂತ್ರಗಳೊಡನೆ ವಿಧಾನಗಳೊಡನೆ ಲಿಂಗಪೂಜೆಯನ್ನಾಚರಿಸಬೇಕು.

ಸಚ್ಚಿದಾನಂದ ಸ್ವರೂಪವಾಗಿದೆ ವೀರಶೈವೇಷ್ಟಲಿಂಗ. "ಚಿದ್ರೂಪ ಜಗದಾಧಾರ ಸ್ಥೂಲ ಸೂಕ್ಷ್ಮ ಪರಾತ್ಪರ !" ಎಂದಿದೆ ಕಾರಣಾಗಮ. ಸ್ಥೂಲವಾಗಿ ಇಷ್ಟಲಿಂಗ, ಸೂಕ್ಷ್ಮವಾಗಿ ಪ್ರಾಣಲಿಂಗ, ಪರಾತ್ಪರವಾಗಿ ಭಾವಲಿಂಗವಾಗಿದೆ. ಈ ತ್ರಿವಿಧಾತ್ಮಕಲಿಂಗ ಸ್ವರೂಪವನ್ನು ಕಾರಣಾಗಮ ಹೀಗೆ ನಿರೂಪಿಸಿದೆ :

"ಮಾಂಗಲ್ಯ ಹೇತವೇ ಸರ್ವಮಂಗಲಾಲಿಂಗಿತಾತ್ಮನೇ
ಮಂಗಲಾರ್ಥಾಭಿಧಾನಾಯ ಮಹಾದೇವಾಯ ಮಂಗಲಂ
ಇಷ್ಟಲಿಂಗಸ್ವರೂಪಾಯಾಭೀಷ್ಟದಾಯಾಸ್ತು ಮಂಗಲಂ।
ಪ್ರಾಣೇಷು ಚ ಮನೋಮಧ್ಯೇ ಜ್ಯೋತಿರ್ಲಿಂಗ ಸ್ವರೂಪಿಣೇ
ಪ್ರಾಣಗ್ರಂಥಿ ಸ್ವರೂಪಾಯ ಪ್ರಾಣಲಿಂಗಾಯ ಮಂಗಲಂ ।
ಭಾವಗ್ರಾಹ್ಯಾಯ ಪೂರ್ಣಾಯ ಭಾವಾಭಾವೈಕಹೇತವೇ
ಕಲಾಸರ್ಗಕೃತೇ ತುಭ್ಯಂ ಭಾವಲಿಂಗಾಯ ಮಂಗಲಂ ॥"

ಇಷ್ಟಲಿಂಗವು ಸರ್ವಮಂಗಲ ಸಂಗಿಯಾಗಿ ಮಾಂಗಲ್ಯ ಕಾರಣವಾಗಿದೆ. ಮಂಗಲಾರ್ಥ ನಿರೂಪಣ ನಾಮವುಳ್ಳದಾಗಿದೆ. ಮಹಾದೇವ ಸ್ವರೂಪವೂ ಅಭಿಷ್ಟಪ್ರದವೂ ಆಗಿ ಇಷ್ಟಲಿಂಗವೆನಿಸಿದೆ. ಮಂಗಲವೆಂದರೆ ಒಳಿತು; ಇಷ್ಟ

ವೆಂದರೆ ಪ್ರಿಯ. ಒಳಿತು ಯಾರಿಗೆ ಬೇಡ ? ಕ್ರಿಯಾಲಿಂಗವು ಒಳಿತಿನದೂ ಆಗಿದೆ; ಪ್ರಿಯವೂ ಆಗಿದೆ. ಅಂತೆಯೆ ಅಭೀಷ್ಟಪ್ರದವೂ ಆಗಿದೆ, ಅದೃಷ್ಟ ಕಾರಿಯೂ ಆಗಿದೆ. ಅದಕ್ಕೆ ಹೆಣ್ಣು ಗಂಡೆಂಬ ಕವಲಿಲ್ಲ. ಅದು ಎಲ್ಲರಿಗೂ ಇಷ್ಟ; ಚೇತನ.

ಪ್ರಾಣಲಿಂಗವು ಪ್ರಾಣಗ್ರಂಥಿ ಸ್ವರೂಪ. ಪ್ರಾಣಗ್ರಂಥಿಯೆಂದರೆ ಜೀವ ರಸವನ್ನು ಸುರಿಸುವ ಶಕ್ತಿ. ಅದುವೆ ಪ್ರಾಣಲಿಂಗ. ಮತ್ತು ಪಂಚಪ್ರಾಣ ಗಳಲ್ಲಿ ಮನೋಮಧ್ಯದಲ್ಲಿ ಬೆಳ್ಳಂ ಬೆಳಗುವ ಜೋತಿರ್ಲಿಂಗ; ಜ್ಞಾನಜ್ಯೋತಿ, ಜ್ಞಾನಾಚಾರ ಚೇತನ. ಅಂತರಂಗ ಪ್ರಕಾಶ. ಚಿದಮೃತ, ಚಿಜ್ಜ್ಯೋತಿ. ಇದಕ್ಕೂ ಲೈಂಗಿಕ ಭೇದವಿಲ್ಲ. ಜ್ಯೋತಿರ್ಲಿಂಗಕ್ಕೆ ಜಾತಿಸೂತಕವುಂಟೆ ?

ಕಲಾಸರ್ಗಕಾರಿ ಭಾವಲಿಂಗ. ಸಕಲ ವಿದ್ಯಾಧ್ಯಾಯ ಕಾರಣ ಕರ್ತ ವಾಗಿದೆ. ಭಾವಾಭಾವಗಳಿಗೆ ಮುಖ್ಯಕಾರಣವೂ ಆಗಿದೆ. ಭಾವಗ್ರಾಹ್ಯ ವಾಗಿದೆ. ಪೂರ್ಣವಾಗಿದೆ. ಅರೆ ಕೊರೆಯಿಲ್ಲದ್ದಾಗಿದೆ. ತೃಪ್ತಿಮಯವಾಗಿದೆ. ಅನುಭವಾನಂದಾತ್ಮಕವೂ ಆಗಿದೆ. ಭಾವಗ್ರಾಹ್ಯವಾಗಿದೆ. ಇದರಿಂದ ಇದಕ್ಕೂ ಭೇದವಿಲ್ಲ. ಭಾವಾಂಗ ಅಥವಾ ಕಾರಣಾಂಗ ಹೆಂಗಸರಿಗಿಲ್ಲವೇನು ? ಈ ತ್ರಿವಿಧ ಲಿಂಗಾರ್ಚನೆಗೆ ಗುರುದೀಕ್ಷೆಯನ್ನು ಪಡೆದ ಸ್ತ್ರೀಯರಿಗೂ ಹಕ್ಕಿದೆ. "ಸುವಾಸಿನೀನಾಂ ಮುಖ್ಯೋಽಯಂ ಲಘುರಾರಾಧನಾ ವಿಧಿಃ ।" ಸಂಕ್ಷಿಪ್ತವಾದ ಈ ಆರಾಧನ ವಿಧಿಯು ಸುವಾಸಿನಿಯರಿಗೂ ಮುಖ್ಯವಾದುದು. ತ್ರಿವಿಧ ಲಿಂಗಾರಾಧನದಿಂದ ತ್ರಿವಿಧಾಂಗಗಳು ತಿಳಿಗೊಳ್ಳುವವು.

"ಯಾಚೇಽಹಂ ಯಾಚೇಽಹಂ ವಚಸಿ ಸತತಂ ನಾಮ ರುಚಿರಂ
ಯಾಚೇಽಹಂ ಯಾಚೇಽಹಂ ಮನಸಿ ಸತತಂ ಭಾವರಚನಾಂ ।
ಯಾಚೇಽಹಂ ಯಾಚೇಽಹಂ ಶಿವ ತವ ಪದಾಂಬೋಜ ಭಕ್ತಿಂ
ಯಾಚೇಽಹಂ ಯಾಚೇಽಹಂ ಪುನರಪಿ ಚ ತಾಮೇವ ಸತತಂ ।
ನಾಧಿಕಂ ಮುಕ್ತಸಂಪ್ರಾಪ್ಯಮಶೋಕಮಚಲಂ ಸುಖಂ
ತ್ವತ್ಪದಂ ದೇಹಿ ಮೇ ಶೀಘ್ರಂ ನ ಜಾನೇ ಪ್ರಾರ್ಥ್ಯಮುತ್ತಮಂ ॥"

ಇಂತಹ ಪವಿತ್ರ ಪ್ರಾರ್ಥನೆ ಯಾರಿಗೆ ಬೇಡ ? ಸವಿಯಾದ ಸೊಗಸಾದ ಶಿವನಾಮಾಮೃತ ಯಾವ ಯಾರ ನಾಲಗೆಗೆ ಬೇಡ ? ಎಂದೆಂದಿಗೂ ಭಾವ

ರಚನೆ ಯಾರ ಮನಸ್ಸಿಗೆ ಬೇಡ ? ಇಲ್ಲಿ ಪ್ರಯೋಗಿಸಿದ 'ಬಾವರಚನ'ಪದ ಭಾವಪೂರ್ಣವಾದುದು, ಧ್ವನಿಪೂರ್ಣವಾದುದು. ಭಾವಪೂರ್ಣ ಕೃತಿ, ಭಾವಾಲಂಕೃತಿ (ಭಾವದ ಬೆಡಗು), ಅಸ್ತಿತ್ವ ಸಿದ್ಧತೆ, ಸ್ವರೂಪ ಸೌಂದರ್ಯ, ಸತ್ತ್ವಿಯ ಸೌಂದರ್ಯ ಯಾರ ಮನಸ್ಸಿಗೆ ಬೇಡ ? ಶಿವನ ಶ್ರೀ ಚರಣ ಭಕ್ತಿ ಯಾರಿಗೆ ಬೇಡ ? "ಶಿವ ತವ ಪದಾಂಬೋಜ ಭಕ್ತಿಂ" ಎಂಬೀ ಆಗಮವಾಣಿ "....ನಿಮ್ಮ ಚರಣಕಮಲದೊಳಗಾನು ತುಂಬಿ" ಎಂಬೀ ಶರಣವಾಣಿಯನ್ನು ನೆನವಿಗೆ ತಾರದಿರದು. ವೀರಶಿವಾಗಮವಾಣಿ ಇನ್ನೂ ಮುಂದುವರಿದು ''ಯಾಚೇಽಹಂ ಪುನರಪಿ ಚ ತಾಮೇವ ಸತತಂ'' ಅಂದರೆ ಅಚ್ಚಳಿಯದ ಸುಖಕಾರಿಯಾದ ಆ ಲಿಂಗಾರಾಧನೆಯನ್ನೆ ಯಾವಾಗಲೂ ಮತ್ತೆ ಮತ್ತೆ ಪ್ರಾರ್ಥಿಸುವೆ – ಎಂದಿದೆ. ಶಿವಪದಕ್ಕಿಂತಲೂ ಶ್ರೇಷ್ಠವಾದುದು ಮತ್ತೊಂದಿಲ್ಲ. ''ತ್ವತ್ಪದಂ ದೇಹಿಮೇ ಶೀಘ್ರಂ'' ಅದೆಂತಹ ಆಸಕ್ತಿ ! ಅದೇನು ಆ ಪ್ರಪತ್ತಿ !! ಪರಶಿವ ಪ್ರಾಪ್ತಿ ಪರಮವಲ್ಲವೆ ? ಅದನ್ನು ಪ್ರೇಮಿಸುವ ಪ್ರಾರ್ಥನೆ ಉತ್ತಮವಲ್ಲವೆ ? 'ನ ಜಾನೇ ಪ್ರಾರ್ಥ್ಯಮುತ್ತಮಂ' ಇದು ದಿಟಕ್ಕೆ ದಿಟ. ಈ ಪ್ರಾರ್ಥನೆಯ ಪ್ರಥಮ ಪಂಕ್ತಿಯಾದ "....ಯಾಚೇಽಹಂ ವಚಸಿ ಸತತಂ ನಾಮರುಚಿರಂ" ಎಂಬುದು "ವಚನದಲ್ಲಿ ನಾಮಾಮೃತ ತುಂಬಿ'' ಎಂಬುದನ್ನು ನೆನವಿಗೆ ತರುತ್ತದೆ. ಅಲ್ಲದೆ ರುಚಿರ ಪದ ಗಂಭೀರ ಧ್ವನಿಯುಳ್ಳುದಾಗಿದೆ.

— ೯ —

ಓ ವಿಭುವೆ ವಿದ್ಯೆಗಳೊಡೆಯನೆ ಸರ್ವಜ್ಞ ಗುರುವೆ ಮಹಾದೇವನೆ, ತಮ್ಮ ಅಮೃತವಾಣಿಯಿಂದ ಅರ್ಚನ ಮಹಾರ್ಚನ ವಿಧಿವಿಧಾನಗಳನ್ನು ಕೇಳಿ ಕೃತಾರ್ಥಳಾಗಿರುವೆನು. ಇನ್ನು ದೀಕ್ಷೆಯಾದವರ ವಿಶೇಷ ನಿಯಮಗಳನ್ನು ಆಲಿಸುವಾಸೆ ! ಅವನ್ನೆಲ್ಲ ಒರೆದು ಅನುಗ್ರಹಿಸು ಕರುಣಾಕರನೆ ! ಎಂದು ಮಹಾದೇವಿ ಕೇಳಲು, ಮಹಾದೇವನು ಬಿಚ್ಚುಮನದಿಂದ ಬಿತ್ತರಿಸುವನು :

ಶಿವಕೃಪೆಗಾಗಿ ಶಿವಪೂಜೆಯನ್ನು ಮಾಡುವವರಿಗೆ ಕಟ್ಟು ಕಟ್ಟಳೆಗಳುಂಟು. ಇಲ್ಲದಿದ್ದರೆ ಹಿಡಿತವಿರದು; ಓರಣವಿರದು. ಓ ಕಲ್ಯಾಣಿ, ನಿತ್ಯಪೂಜೆಗೆ ಬೇಕಾದ ಪತ್ರ ಪುಷ್ಪ ಬತ್ತಿ ಜಪಗಳಿಗೆ ಸಂಖ್ಯಾನಿಯಮವಿರಬೇಕು; ಇಲ್ಲದೆ ಹೋದರೆ ಸಲ್ಲವು. ದೀಕ್ಷಾ ಸಂಸ್ಕಾರವಿಲ್ಲದವರು ತಂದ ಮುಟ್ಟಿದ ನೀರು ಗಂಧಾದಿಗಳು ಅರ್ಚನ–ಅರ್ಪಣಗಳಿಗೆ ಸಲ್ಲವು. ಪೂಜಾ ವೇಳೆಯಲ್ಲಿ ದೀಕ್ಷಾ ಸಂಸ್ಕಾರವಿಲ್ಲದ

ವರನ್ನು ನೋಡಬಾರದು; ಮುನಿಸಬಾರದು; ಮತ್ತೊಂದನ್ನು ಚಿಂತಿಸ ಬಾರದು; ಮತ್ತೊಬ್ಬರೊಡನೆ ಮಾತಾಡಬಾರದು

"ಲಿಂಗಮಂಗೇ ಮುಖೇ ಭಸ್ಮ ಗಲೇ ರುದ್ರಾಕ್ಷಮೇವ ಚ।
ಮನ್ನಾಮ ವಾಚಿ ಚ ತಥಾ ನ ಕದಾಽಪಿ ವಿಯೋಜಯೇತ್ ॥"

ಅಂಗದಲ್ಲಿ ಲಿಂಗ, ಹಣೆಯಲ್ಲಿ ಭಸ್ಮ ಕೊರಳಲ್ಲಿ ರುದ್ರಾಕ್ಷ, ನಾಲಗೆಯಲ್ಲಿ ಶಿವನಾಮ ಇದ್ದಾಗಬೇಕು. ಇವನ್ನು ಯಾವಾಗಲೂ ಅಗಲಬಾರದು. ಅರುವೆ (ಬಟ್ಟೆ), ಒಡವೆ, ಹೂವು, ಓಗರ, ಹಾಲು, ನೀರು, ಮದ್ದು ಇವೆ ಮೊದ ಲಾದವನ್ನು ಪ್ರಾಣ ಹೋಗುವ ಪ್ರಸಂಗ ಬಂದರೂ ಶಿವಲಿಂಗಕ್ಕೆ ಸಮರ್ಪಿಸದೆ ಸೇವಿಸಬಾರದು. ಅನ್ಯ ದೇವತೆಗಳಿಗೆ ನಿವೇದಿಸಿದುದನ್ನು ಲಿಂಗಕ್ಕೆ ನಿವೇದಿಸ ಬಾರದು; ಲಿಂಗಕ್ಕೆ ಸಮರ್ಪಿಸಿದುದನ್ನು ಅನ್ಯದಕ್ಕೆ ಅರ್ಪಿಸಬಾರದು.

ಮತ್ತೆ ಪಾರ್ವತಿಯ ಪ್ರಶ್ನೆಯಿದು :

ಓ ಮಹೇಶಾನ, ಹೀಗೆ ಹೇಳುವುದಾದರೆ, ಇದು ಸ್ತ್ರೀಯರಿಗೆ ಹೇಗೆ ಸಾಧ್ಯ ? ಪತ್ನಿ ನಿತ್ಯ ಪತಿಯ ಉಚ್ಛಿಷ್ಟ ಸೇವಿಸಬೇಕಾಗುವುದು. ಭೋಜ್ಯ ವನ್ನು ಲಿಂಗಕ್ಕೆ ಸಮರ್ಪಿಸದೆ ತೆಗೆದುಕೊಳ್ಳಬಾರದೆಂದು ಹಿಂದೆ ನೀವೇ ಹೇಳಿ ರುವಿರಿ. ಒಂದುವೇಳೆ ಗಂಡನೇ ಮೊದಲು ತನ್ನ ಲಿಂಗಕ್ಕೆ ಸಮರ್ಪಿಸಿರುವ ನೆಂದರೆ, ಅದನ್ನು ಮತ್ತೆ ಹೇಗೆ ಸಮರ್ಪಿಸುವುದು ? ಇಲ್ಲವೆ ಸಮರ್ಪಿಸದೆ ತೆಗೆದುಕೊಳ್ಳಬೇಕೆ ? ಇದು ನನಗೆ ಸಂಶಯ ಬಂದಿದೆ. ಕರುಣಾಕರರಾದ ತಾವು ಇದನ್ನು ಪರಿಹರಿಸಬೇಕು.

ಚನ್ನಾಗಿ ಕೇಳಿದೆ ಓ ದೇವಿ ! ನಿನ್ನ ನಿವೇದನದಲ್ಲಿ ವಿಶೇಷವಿದೆ. ಗೋಪ್ಯವಿದು. ಆದರೂ ಪ್ರಿಯಳಾದ ನಿನಗೆ ಹೇಳುವೆ. ಸ್ಥಿರಚಿತ್ತಳಾಗಿ ಆಲಿಸು.

ನಿವೇದನ (ಸಮರ್ಪಣ)ವು ಲಿಂಗಭೋಗರೂಪವೆಂದು ಅನುಜ್ಞಾರೂಪ ವೆಂದು ಎರಡು ಬಗೆ ! ಸತಿಗೆ ಪತಿಯ ಶೇಷ ನಿವೇದನವು ಮತ್ತು ಶಿಷ್ಯನಿಗೆ ಗುರು ಪ್ರಸಾದ ನಿವೇದನವು ಶಿವತೀರ್ಥದ ಅರ್ಪಣವು ಅನುಜ್ಞಾರೂಪವಾದುದು. ದೇಹಿಗಳಿಗೆ ಕರ್ಮಯೋಗದಿಂದ ನಿತ್ಯ ಭೋಗಗಳು ಇಷ್ಟಾನಿಷ್ಟ ಭೇದದಿಂದ

ಲಭಿಸುತ್ತವೆ. ಅವುಗಳಲ್ಲಿ ಇಷ್ಟದಲ್ಲಿ ಭೋಗರೂಪ ನಿವೇದನವನ್ನು ಅನಿಷ್ಟದಲ್ಲಿ ಅನುಜ್ಞಾರೂಪನಿವೇದನವನ್ನು ಮಾಡಬೇಕು.

ಮತ್ತೆ ಮೃಡಾಣಿ ಕೇಳುವಳು : ಪತಿಶೇಷವು ಲಿಂಗಭೋಗಾರ್ಪಣಾತ್ಮಕವಾಗಿ ಯೋಜಿಸಲಾಗುವುದಿಲ್ಲೆಂದರೆ ಸ್ತ್ರೀಯರಿಗೆ ನಿತ್ಯ ನಿವೇದನ ಭಗ್ನತೆಯುಂಟಾಗುತ್ತದೆ. ಏಕೆಂದರೆ, ನಿತ್ಯವೂ ಪತಿಶೇಷವೆ ಸೇವ್ಯವೆಂದು ಹೇಳಲಾಗಿದೆ ಅಥವಾ ಲಿಂಗಾರ್ಚನವನ್ನು ಮಾಡಿ ಪತಿಶೇಷ ನಿವೇದನವನ್ನು ಹೇಗೆ ಮಾಡುವುದು ? ಒಂದು ವೇಳೆ ಪತಿಶೇಷವು ಯೋಗ್ಯವಲ್ಲೆಂದು ಹೇಳುವುದಾದರೆ ಪತಿವ್ರತೆಯು ಅನ್ಯರಿಂದ ಶೇಷವನ್ನು ಭುಂಜಿಸಬಹುದೆ ? ಇಲ್ಲವೆ ಮತ್ತೆ ಹೇಗೆ ಮಾಡುವುದು ?

ಇದಕ್ಕೆ ಮೃಡನ ಉತ್ತರವಿದು : ಸುವಾಸಿನಿಯು ಲಿಂಗವನ್ನರ್ಚಿಸಿ ಅನ್ಯರಿಂದಲಾದರೂ (ಗುರು ಅಥವಾ ಕ್ರಿಯಾವಂತರಿಂದಲಾದರೂ) ಲಿಂಗಭೋಗರೂಪ ನಿವೇದನವನ್ನು ಮಾಡಬೇಕು. ಮತ್ತು ಗುರುವಿನ ಅನುಜ್ಞೆಯಿಂದ ತನ್ನ ಪತಿಯ ಶೇಷವನ್ನು ನಿವೇದಿಸಬೇಕು. ಶಿವಲಿಂಗ ಭಕ್ತಿಯುಕ್ತಳಾಗಿ ಉಭಯ ಶೇಷವನ್ನೂ ಸ್ತ್ರೀಯರು ಭುಂಜಿಸಬೇಕು. ಅನರ್ಪಿತವು ಹೇಗೆ ಅಭೋಜ್ಯವೋ ಹಾಗೆ ಲಿಂಗಕ್ಕೆ ಅರ್ಪಿತವಾದುದು ಅತ್ಯಾಜ್ಯವು. ಪ್ರಸಾದಿಯಾಗದವರು ಶಿವಪ್ರಸಾದವನ್ನು ಪಡೆಯಲು ಅನರ್ಹರು. ಪ್ರಸಾದಿ ಸ್ಥಲಿಗಳಾಗಿ ಗುರುಪ್ರಸಾದ ಪಡೆಯಲು ಯಾವ ಅಭ್ಯಂತರವಿಲ್ಲ. ಅಲ್ಲಿ ಅನ್ಯಭಾವವಿರುವುದಿಲ್ಲ. ಸತಿಯಲ್ಲಿರುವ ಪತ್ಯಂಗ (ಪತ್ಯಂಶ)ಕ್ಕೂ ಗುರುವಾಗಿರುತ್ತಾನೆ. ಗುರು ಪಿತೃರೂಪನಾಗಿರುತ್ತಾನೆ.

ನಿತ್ಯ ಶಿವಾರ್ಚನಪರನು, ಶಿವಧ್ಯಾನ ಚೇತನನು, ಶಿವನಾಮ ಚಿಂತನಪರನು ಆದವನು ಅನ್ಯದೇವತೆಗಳನ್ನು ಸ್ಮರಿಸಬಾರದು.

ವ್ಯಾವಹಾರಿಕ ಜೀವನದಲ್ಲಿ ಇದು ಸಾಧ್ಯವೇ ?

"ರಾಜೈಕ ಸೇವಕಸ್ಯಾಪಿ ತದಾಜ್ಞಾವಶತಃ ಪ್ರಿಯೇ
ತನ್ಮಂತ್ರ್ಯಾದೇಶ್ಚ ಕೈಂಕರ್ಯಂ ಭೃತ್ಯಸ್ಯ ನ ಹಿ ದುಷ್ಯತಿ ।
ಮನ್ನಿಷ್ಠಾನಾಮಪಿ ತಥಾ ಮದಾಜ್ಞಾಶ್ರುತಿಚೋದನಾತ್
ನಿತ್ಯ ನೈಮಿತ್ತಿಕೇ ಚಾನ್ಯದೇವಸೇವಾ ನ ದುಷ್ಯತಿ ॥"

— ೭ —

ಇಲ್ಲಿ ಷಟ್‌ಸ್ಥಲ ಪೂಜಾವಿಧಾನ ಮತ್ತು ಷಡ್ಲಿಂಗಾರ್ಪಣ ವಿಧಾನಗಳು ವಿವರಣಗೊಂಡಿವೆ.

ಈ ಮೊದಲು ಹೇಳಿದಂತೆ ಶಿವಪೂಜಾ ಸಾಮಗ್ರಿಯನ್ನು ಸಜ್ಜುಗೊಳಿಸಿ ಕೊಂಡು,

"ಗುರುಮಭ್ಯರ್ಚ್ಯ ನಿಯತಂ ಯಸ್ಯ ದೇವೇತಿ ಮಂತ್ರತಃ
ತೀರ್ಥ ಪ್ರಸಾದೌ ಗೃಹ್ಣೀಯಾನ್ಮಂತ್ರಪೂಜಾಯೋಗ್ಯತಾಪ್ತಯೇ ।
ಇತಿ ಭಕ್ತಸ್ಥಲಂ ಪ್ರೋಕ್ತಮಥ ಮಾಹೇಶ್ವರಸ್ಥಲೇ
ಅಯಂ ಮೇ ಹಸ್ತ ಇತಿ ತು ಹಸ್ತ ಶುದ್ಧಿಂ ವಿಧಾಯ ವೈ ॥"

ಆರಾಧಕನು ಮೊದಲು ತನ್ನ ನಿಯತನಾದ ಅಂದರೆ ನಿಶ್ಚಿತನಾದ ಗುರುವನ್ನು "ಯಸ್ಯ ದೇವೇತಿ" ಮಂತ್ರದಿಂದ ಅರ್ಚಿಸಿ ಪಾದೋದಕ ಪ್ರಸಾದಗಳನ್ನು ಸ್ವೀಕರಿಸಬೇಕು. ಇದುವೆ ಭಕ್ತಸ್ಥಲ. ಇದರಿಂದ ಲಿಂಗಪೂಜೆಗೆ ಯೋಗ್ಯತೆ ಯುಂಟಾಗುತ್ತದೆ. ಬಳಿಕ ಮಾಹೇಶ್ವರ ಸ್ಥಲದಲ್ಲಿ "ಅಯಂ ಮೇ ಹಸ್ತೋ ಭಗವಾನ್" ಎಂಬ ಮಂತ್ರದೊಡನೆ ತನ್ನ ಹಸ್ತ (ಕರಸ್ಥಲ) ಶುದ್ಧಿಯನ್ನು ಮಾಡಿ, ಸರ್ವಭೂತಸ್ಥವಾದ ಭಸ್ಮಾಸನವನ್ನೆಸಗಿ ಅಂದರೆ ಭಸ್ಮದಿಂದ ಮಂತ್ರವನ್ನು (ಓಂಕಾರವನ್ನು) ಲಿಖಿಸಿ, ಆ ಮಂತ್ರ ಭಸ್ಮಪೂತ ಕರಸ್ಥಲದಲ್ಲಿ "ವೇದಾಹಮೇತಂ ಪುರುಷಂ ಮಹಂತಂ" ಎಂಬ ಮಂತ್ರದಿಂದ ಇಷ್ಟಲಿಂಗವನ್ನಿರಿಸಿ, "ಸರ್ವಲಿಂಗಂ ಸ್ಥಾಪಯತಿ" ಎಂಬ ಮಂತ್ರದಿಂದ ತನ್ನ ಅಂತರಂಗದಲ್ಲಿರುವ ಉಳಿದೆಲ್ಲ ಲಿಂಗಗಳನ್ನು ಇಷ್ಟಲಿಂಗದಲ್ಲಿ ಪರಿಭಾವಿಸಿ ಹುದುಗಿಟ್ಟ ಹಣದಂತೆ ನಿಕ್ಷೇಪಿಸಬೇಕು. ಮತ್ತು ರುದ್ರನೆ ಲಿಂಗತತ್ತ್ವವೆಂದು ಭಾವಿಸಬೇಕು. ಬಳಿಕ ತನ್ನ ದೀಕ್ಷಾ ಗುರುವನ್ನು ಧ್ಯಾನಿಸಿ, ಷಡಂಗನ್ಯಾಸವನ್ನು ಚನ್ನಾಗಿ ಮಾಡಿ, ಷಡಕ್ಷರ ಮಂತ್ರವನ್ನು ಸಾವಿರಾಗಲಿ ಆರುನೂರಾಗಲಿ ಜಪಿಸಬೇಕು. ಆಗ ಪ್ರಸಾದಿಸ್ಥಲ ಪ್ರಾಪ್ತಿಸುತ್ತದೆ.

"ಪ್ರಸಾದಿ ಸಂಜ್ಞಕೇ ಪಶ್ಚಾತ್ ಸ್ಥಲೇ ಲಿಂಗೇ ಚ ಭಸ್ಮ ವೈ
ಅಭ್ಯುಂಕ್ಷ್ಯ ನಾನುಧ್ಯಾಯೇಚ್ಚ ತಮೇವೈಕಮಿತಿ ಸ್ಮರನ್ ।

ದಶಾವಧಾನವಿಧಿನಾ ನಿರೀಕ್ಷ್ಯ ಸ್ವೇಷ್ಟಲಿಂಗಕಂ
ನೀರಾಜನಂ ಸಾನುರಾಗಂ ಯಾ ತೇ ರುದ್ರೇತಿ ನಿರ್ದಿಶೇತ್ ॥"

ಬಳಿಕ ಆ ಪ್ರಸಾದಿಸ್ಥಲದಲ್ಲಿದ್ದು ಲಿಂಗದಲ್ಲಿದ್ದು ಭಸ್ಮವನ್ನು ಅಭ್ಯಂಕ್ಷಿಸಿ, ತನ್ನನ್ನು ನೆನೆಯದೆ ಅಂದರೆ ಅಂಗವೆಂಬ ಭಾವವಿರದೆ ಲಿಂಗವೇ ತಾನೆಂಬ ಏಕೋಭಾವವನ್ನು ತಳೆದು ದಶಾವಧಾನವಿಧಿಯಿಂದ ಅಂದರೆ ಹತ್ತಿಂದ್ರಿಯ ಸಂಯಮನದಿಂದ ತನ್ನ ಇಷ್ಟಲಿಂಗವನ್ನು ನಿಟ್ಟಿಸಿ, "ಯಾತ್ರೇ ರುದ್ರ ಶಿವಾ ತನೂ...." ಎಂಬ ಮಂತ್ರದೊಡನೆ ಅನುರಾಗ(ಭಕ್ತಿ)ದಿಂದ ನೀರಾಜನವನ್ನು ನಿರ್ದೇಶಿಸಬೇಕು. ಆಗ ಪ್ರಾಣಲಿಂಗಸ್ಥಲ ಪ್ರಾಪ್ತಿಸುತ್ತದೆ.

"ಪ್ರಾಣಲಿಂಗಿಸ್ಥಲೇ ಭಸ್ಮ ಲಿಂಗೋಪರಿ ನಿಧಾಯ ಚ
ಮೂಲೇನೈವ ಹಿ ಲಿಂಗಾಗ್ರೇ ಪುಷ್ಪಂ ನಿಕ್ಷಿಪ್ಯ ಮಂತ್ರಿತಂ ।
ನೀರಾಜನಂ ದರ್ಶನಾಖ್ಯಮಸೌ ಯ ಇತಿ ದರ್ಶಯೇತ್ ।"

ಪ್ರಾಣಲಿಂಗಸ್ಥಲಿಯಾದ ಪೂಜಕನು ಲಿಂಗದ ಮೇಲೆ ಭಸ್ಮವನ್ನು ಧರಿಸಿ, ಮೂಲ ಮಂತ್ರೋಚ್ಚಾರದೊಡನೆ ಲಿಂಗದ ಮೇಲೆ ಮಂತ್ರಿತ ಪುಷ್ಪವನ್ನಿರಿಸಿ ನೀರಾಜನವನ್ನು ದರ್ಶಿಸಬೇಕು. ಬಳಿಕ ಆ ಆ ಪಾತ್ರಗಳಲ್ಲಿರುವ ಪಾದ್ಯ ಅರ್ಘ್ಯ ಆಚಮನಗಳನ್ನು ಅಭಿಷೇಕಿಸಿ ತ್ಯಾಗಪಾತ್ರೆಯಲ್ಲಿರುವ ಮಂತ್ರೋದಕದಿಂದ ಲಿಂಗಕ್ಕೆ ಮಜ್ಜನ ಮಾಡಬೇಕು. ಆ ಮಜ್ಜನೋದಕವನ್ನು ಆಧಾರ ಪಾತ್ರೆ ಯಿಂದೆತ್ತಿಕೊಂಡು ತಲೆಯ ಮೇಲೆ ಪ್ರೋಕ್ಷಿಸಿಕೊಳ್ಳಬೇಕು. ವಸ್ತ್ರದಿಂದ ತೇವ ವನ್ನು ತೆಗೆದು ತಾನು ಪದ್ಮಾಸನದಲ್ಲಿ ಕುಳಿತು ಪಾದಗಳನ್ನು ಭಸ್ಮಾಸನದಲ್ಲಿರಿಸಿ ಲಿಂಗವನ್ನು ಭಾವಿಸಬೇಕು. ಲಿಂಗವನ್ನು ಗಂಧಾದಿಗಳಿಂದ ಅಲಂಕರಿಸಬೇಕು. ದಶಾಂಗಮಹಿತ ಧೂಪವನ್ನು ಹಾಕಬೇಕು; ಉದ್ದೀಪಿಸಬೇಕು. ಛತ್ರ ಹಿಡಿದು, ಚಾಮರ ಬೀಸಿ, ದರ್ಪಣತೋರಿ, ಗಂಟೆಯ ಬಾಜಿಸಿ, ಗೀತವ ಹಾಡಿ, ಪ್ರದಕ್ಷಿಣ ನಮಸ್ಕಾರಗಳ ಮಾಡಿ, ನಿವೇದಿಸಿಕೊಂಡು ಪೂಜಾ ದ್ರವ್ಯಗಳಾದ ಪತ್ರ ಪುಷ್ಪಾದಿಗಳನ್ನು ಇಳುಹಬೇಕು. ಅಲ್ಲಿಗೆ ಶರಣಸ್ಥಲ ಸಂಪನ್ನನಾಗು ತ್ತಾನೆ.

"ಶರಣಾಖ್ಯಸ್ಥಲೇ ಭೋಜ್ಯಪದಾರ್ಥೇಷ್ವಗ್ನಿರಿತ್ಯತಃ
ವಿಕೀರ್ಯ ಸಜಲಂ ಭಸ್ಮ ಸವ್ಯಾಹೃತಿಕಯಾ ತಥಾ ।

ಸಾವಿತ್ರ್ಯಾ ರುದ್ರಗಾಯತ್ರ್ಯಾ ಪರಿಷಿಚ್ಯೈವಮಂಬುಭಿಃ
ಸ್ವಾಹಾಂತೇಭ್ಯಸ್ತಥಾಚಾರ ಲಿಂಗಾದಿಭ್ಯೋಽರ್ಪಯೇತ್ತತಃ ।
ಷಡ್ಲಿಂಗಾರ್ಪಣ ಸದ್ಭಾವೇ ವಿಶೇಷೋಽಸ್ತಿ ಶೃಣು ಪ್ರಿಯೇ ॥"

ಶರಣಸ್ಥಲದಲ್ಲಿದ್ದು ಭೋಜ್ಯ ಪದಾರ್ಥಗಳನ್ನು ಮಂತ್ರೋದಕ ಭಸ್ಮಗಳೊಡನೆ ರುದ್ರಗಾಯತ್ರಿಯಿಂದ ಆಚಾರಲಿಂಗಾದಿಗಳಿಗೆ ಅರ್ಪಿಸಬೇಕು. ಷಡ್ಲಿಂಗಾರ್ಪಣ ಸದ್ಭಾವದಲ್ಲಿ ವಿಶೇಷವಿದೆ.

ಆಚಾರಲಿಂಗಾರ್ಪಣ :

"ಭಕ್ತಸ್ಥಲೇ ಕ್ರಿಯಾಶಕ್ತಿಯುತೆ ವೈ ನಾಸಿಕಾಂಗಗೇ
ಆಚಾರಲಿಂಗ ಸಂಜ್ಞೇಽಸ್ಮಿನ್ ಸದ್ಯೋಜಾತಮುಖಾತ್ಮಕೇ ।
ಗಂಧಪ್ರಸಾದಂ ಸದ್ಭಕ್ತ್ಯಾ ಚಿತ್ತಹಸ್ತೇನ ಚಾರ್ಪಯೇತ್ ।"

ಭಕ್ತಸ್ಥಲದ ನಾಸಿಕಾಂಗದಲ್ಲಿರುವ ಕ್ರಿಯಾಶಕ್ತಿಯಿಂದ ಕೂಡಿದ ಆಚಾರ ಲಿಂಗದ ಸದ್ಯೋಜಾತ ಮುಖದಲ್ಲಿ ಸದ್ಭಕ್ತಿಯಿಂದ ಚಿತ್ತ ಹಸ್ತದಿಂದ ಗಂಧ ಪ್ರಸಾದವನ್ನು ಅರ್ಪಿಸಬೇಕು.

ಗುರುಲಿಂಗಾರ್ಪಣ :

"ಮಾಹೇಶ್ವರಸ್ಥಲೇ ಜ್ಞಾನಶಕ್ತಿಕೇ ರಸನಾಂಗಗೇ
ಗುರುಲಿಂಗಾಭಿಧೇ ವಾಮದೇವವಕ್ತ್ರೇ ವಿಶೇಷತಃ
ಬುದ್ಧಿಹಸ್ತೇನ ತು ರುಚಿಂ ನಿಷ್ಠಾಭಕ್ತ್ಯಾ ಸಮರ್ಪಯೇತ್ ।"

ಮಾಹೇಶಸ್ಥಲದ ರಸನಾಂಗದಲ್ಲಿರುವ ಜ್ಞಾನಶಕ್ತಿಯುಕ್ತ ಗುರುಲಿಂಗದ ವಾಮದೇವ ಮುಖಕ್ಕೆ ವಿಶೇಷವಾಗಿ ನಿಷ್ಠಾಭಕ್ತಿಯಿಂದ ಬುದ್ಧಿಹಸ್ತದಿಂದ ರುಚಿ ಪ್ರಸಾದವನ್ನು ಸಮರ್ಪಿಸುವುದು.

ಶಿವಲಿಂಗಾರ್ಪಣ :

"ಸ್ಥಲೇ ಪ್ರಸಾದಿಸಂಜ್ಞೇಽಸ್ಮಿನ್ನಿಚ್ಛಾಶಕ್ತಿ ಸಮನ್ವಿತೇ
ದೃಗಂಗಕೇಽ ಘೋರಮುಖೇ ಶಿವಲಿಂಗಾಭಿಧೇ ಪುನಃ
ಭಕ್ತ್ಯಾಽವಧಾನಯಾ ರೂಪಮಹಂಕಾರೇಣ ಚಾರ್ಪಯೇತ್ ।"

ಪ್ರಸಾದಿ ಸ್ಥಲದ ಧೃಗಂಗದಲ್ಲಿರುವ ಇಚ್ಛಾಶಕ್ತಿ ಸಂಪನ್ನ ಶಿವಲಿಂಗದ ಅಘೋರ ಮುಖದಲ್ಲಿ ಅವಧಾನ ಭಕ್ತಿಯಿಂದ ಅಹಂಕಾರ ಹಸ್ತದಿಂದ ರೂಪ ಪ್ರಸಾದವನ್ನು ಸಮರ್ಪಿಸುವುದು.

ಚರಲಿಂಗಾರ್ಪಣ :

"ಪ್ರಾಣಲಿಂಗಿಸ್ಥಲೇ ತ್ವಾದಿಶಕ್ತಿಯುಕ್ತೇ ತ್ವಗಂಗಗೇ
ಚರಲಿಂಗಾಭಿಧೇ ತತ್ಪುರುಷ ವಕ್ತ್ರೇ ದೃಢವ್ರತಃ
ಭಕ್ತ್ಯಾಽನುಭವಯಾ ಮನೋ ಹಸ್ತೇನ ಸ್ಪರ್ಶಮರ್ಪಯೇತ್ ।"

ಪ್ರಾಣಲಿಂಗಿಸ್ಥಲದ ತ್ವಗಂಗದಲ್ಲಿರುವ ಆದಿಶಕ್ತಿಯುಳ್ಳ ಚರಲಿಂಗದ ತತ್ಪುರಷ ಮುಖಕ್ಕೆ ಅನುಭವ ಭಕ್ತಿಯಿಂದ ಮನೋಹಸ್ತದಿಂದ ಸ್ಪರ್ಶಪ್ರಸಾದ ವನ್ನು ಸಮರ್ಪಿಸುವುದು.

ಪ್ರಸಾದಲಿಂಗಾರ್ಪಣ :

"ಶರಣಸ್ಥಲೇ ತು ಪರಯಾ ಶಕ್ತ್ಯಾ ಯುಕ್ತೇ ಶ್ರವೋಂಗಗೇ
ಪ್ರಸಾದಲಿಂಗೇ ತ್ವೀಶಾನಮುಖೇ ಶಬ್ದ ಪ್ರಸಾದಕಂ
ಆನಂದ ಭಕ್ತ್ಯಾ ಸುಜ್ಞಾನ ಹಸ್ತೇ ನೈವ ಸಮರ್ಪಯೇತ್ ।"

ಶರಣಸ್ಥಲದ ಶ್ರೋತ್ರಾಂಗದಲ್ಲಿರುವ ಪರಾಶಕ್ತಿಯಿಂದ ಕೂಡಿದ ಪ್ರಸಾದ ಲಿಂಗದ ಈಶಾನ ಮುಖದಲ್ಲಿ ಆನಂದಭಕ್ತಿಯಿಂದ ಸುಜ್ಞಾನ ಹಸ್ತದಿಂದ ಶಬ್ದ ಪ್ರಸಾದವನ್ನು ಸಮರ್ಪಿಸುವುದು.

ಮಹಾಲಿಂಗಾರ್ಪಣ :

"ಐಕ್ಯಸ್ಥಲೇ ತು ಚಿಚ್ಛಕ್ತಿಯುತೇ ವೈ ಮಾನಸಾಂಗಗೇ
ಮಹಾಲಿಂಗೇ ಪರಶಿವಮುಖೇ ಸಂಕಲ್ಪಮರ್ಪಯೇತ್
ಸದ್ಭಾವಾಭಿಖ್ಯಹಸ್ತೇನ ಭಕ್ತ್ಯಾಸಮರಸಾಖ್ಯಯಾ ।"

ಐಕ್ಯಸ್ಥಲದ ಮಾನಸಾಂಗದಲ್ಲಿರುವ ಚಿಚ್ಛಕ್ತಿಯಿಂದೊಡಗೂಡಿದ ಮಹಾ ಲಿಂಗದ ಪರಶಿವ ಮುಖಕ್ಕೆ ಸಮರಸ ಭಕ್ತಿಯಿಂದ ಸದ್ಭಾವ ಹಸ್ತದಿಂದ ಸಂಕಲ್ಪ (ಸಂತೃಪ್ತಿ) ಪ್ರಸಾದವನ್ನು ಸಮರ್ಪಿಸುವುದು.

"ಏವಮಂಗಂ ಚ ಲಿಂಗಂ ಚ ಭಕ್ತಿಂ ಶಕ್ತಿಂ ತಥಾ ಸ್ಥಲಂ
ಮುಖಂ ಹಸ್ತಂ ಪ್ರಸಾದಂ ಚ ಜ್ಞಾತ್ವಾ ವೈ ಸಮ್ಯಗರ್ಚಯೇತ್
ಏವಮರ್ಪಣ ಸದ್ಭಾವಂ ಸರ್ವದೈವ ಸಮಭ್ಯಸೇತ್ ।
ಸಮರ್ಪಣಂ ದ್ವಿಧಾ ಪ್ರೋಕ್ತಮರ್ಚಾಂಗಂ ಸಾರ್ವಕಾಲಿಕಂ
ಸಮರ್ಪಣೇ ಸಮರ್ಚಾಂಗೇ ರುಚಿಂ ಭಾವೇನ ನಾನ್ಯಥಾ ।
ಶರಣಾಖ್ಯಸ್ಥಲೇಽಪ್ಯೇವಮರ್ಪಣಂ ಷಟ್‌ಸ್ಥಲಾತ್ಮಕಂ
ಐಕ್ಯ ಸ್ಥಲೇ ತು ಮೂಲೇನ ಲಿಂಗೇ ಪುಷ್ಪಂ ನಿಧಾಯ ಚ ।
ಧೂಪಂ ಸಮರ್ಪ್ಯಚಾನಂದ ನೀರಾಜನಮಥಾರ್ಪಯೇತ್
ಯತೋ ವಾಚೋ ನಿವರ್ತಂತ ಇತಿ ಮಂತ್ರಂ ಜಪನ್ ಪುನಃ ॥"

ಷಟ್‌ಸ್ಥಲಾರ್ಚನ ಷಡ್ಲಿಂಗಾರ್ಪಣ ಆಚರಣೆಗೆ ಬೇಕಾದ ಅಷ್ಟ ಸಕೀಲಗಳ ನಿರೂಪಣ ಅನಾದಿ ವೀರಶೈವಕ್ಕೆ ಸೇರಿದುದು. ಅವು ಇಲ್ಲಿ ಹೀಗೆ ನಿರೂಪಣ ಗೊಂಡಿವೆ: ಅಂಗ-ಲಿಂಗ, ಭಕ್ತಿ-ಶಕ್ತಿ, ಹಸ್ತ-ಮುಖ, (ಪದಾರ್ಥ)ಪ್ರಸಾದ ಇವು ಎಂಟು ಸಕೀಲಗಳು. ಇವನರಿಯದೆ ಅರ್ಚನೆ ಘಟಿಸದು. "ಜ್ಞಾತ್ವಾ ವೈ ಸಮ್ಯಗರ್ಚಯೇತ್" ಎಂಬ ಸಲಹೆ ಸಂಸ್ಮರಣೀಯ. ಇಲ್ಲಿಯವರೆಗೆ ನಿರೂಪಿಸಿ ದುದು ಸಮರ್ಪಣ ಸದ್ಭಾವ! ಇದನ್ನು ಯಾವಾಗಲೂ ಚನ್ನಾಗಿ ಅಭ್ಯಸಿಸ ಬೇಕು. "ಸರ್ವದೇವ ಸಮಭ್ಯಸೇತ್"!

ಅರ್ಚಾಂಗವೆಂದು ಸಾರ್ವಕಾಲಿಕವೆಂದು ಸಮರ್ಪಣ ಇಬ್ಬಗೆ! ಅರ್ಚಾಂಗ ದಲ್ಲಿ ಸಮರ್ಪಣ ರುಚಿಭಾವದಿಂದ ಘಟಿಸುತ್ತಿದೆಯಲ್ಲದೆ ಬೇರೆ ಇಲ್ಲ.

ಶರಣಸ್ಥಲದಲ್ಲಿಯೂ ಅರ್ಪಣವಿಧಾನ ಷಟ್‌ಸ್ಥಲಾತ್ಮಕವಾದುದು. ಇನ್ನು ಕೊನೆಯದಾಗಿ ಐಕ್ಯಸ್ಥಲ ಪೂಜಾವಿಧಾನ ಮೂಲಮಂತ್ರ ಮಾತ್ರದಿಂದ ನಡೆಯುತ್ತದೆ. ಇಷ್ಟಲಿಂಗದ ಮೇಲೆ ಹೂವೊಂದನ್ನು ಇರಿಸಿ, ಧೂಪ ವನ್ನರ್ಪಿಸಿ, ಆನಂದ ನೀರಾಜನವನ್ನೆತ್ತಿ "ಯತೋ ವಾಚೋ ನಿವರ್ತಂತ ಅಪ್ರಾಪ್ಯ ಮನಸಾ ಸಹ।" ಎಂಬ ಮಂತ್ರವನ್ನು ಜಪಿಸಬೇಕು. "ಸವಿಶ್ವ ಕೃತ್"....! ಎಂಬುದನ್ನು ಪಠಿಸುತ್ತ ತಾಂಬೂಲವನ್ನು ಸಮರ್ಪಿಸಬೇಕು. ಮಂತ್ರಪುಷ್ಪಾರ್ಪಣವಾಗಬೇಕು. ಬಳಿಕ ಹೀಗೆ ಪೂಜೆಯನ್ನು ಪರಿಸಮಾಪ್ತಿ ಗೊಳಿಸಬೇಕು:

"ಸೋಽಬ್ರವೀದಿತಿ ಮಂತ್ರೇಣ ವಸ್ತ್ರೇಣಾವೃತ್ಯ ಲಿಂಗಕಂ
ಅಣೋರಣೀಯಾನಿತಿ ತು ಪೇಟಿಕಾಯಾಂ ಸುವಿನ್ಯಸೇತ್।
ಏವಂ ಮಹಾರ್ಚನಂ ಪ್ರೋಕ್ತಂ ಮಹಾದೇವಿ ಮಹಾ ಫಲಂ
ವಿಧಿನಾಽನೇನ ಸಂಪೂಜ್ಯ ನ ಪುನರ್ಜನ್ಮಭಾಗ್ಭವೇತ್ ॥"

"ಸೋಽಬ್ರವಿತ್" ಮಂತ್ರ ಪಠನದೊಡನೆ ಇಷ್ಟಲಿಂಗವನ್ನು ಹುದುಗ ಬಟ್ಟೆಯಲ್ಲಿರಿಸಿ "ಅಣೋರಣೀಯಾನ್" ಚುಳುಕಕ್ಕೆ ಚುಳುಕು ಎಂಬೀ ಅರ್ಥದ ಮಂತ್ರವನ್ನು ಪಠಿಸುತ್ತ ಇಷ್ಟಲಿಂಗವನ್ನು ಕರಡಿಗೆಯಲ್ಲಿರಿಸಬೇಕು. ಶಿವಾಗಮ ಕಾಲದಲ್ಲಿಯೆ ಕರಡಿಗೆಯ ಧಾರಣವಿದ್ದಿತೆಂಬುದನ್ನು ಗಮನಿಸಬೇಕು. ಲಿಂಗದ ಚುಳುಕು ಭಾವವೂ ಅಂದಿನದೆ ಆಗಿದೆ. ಲಿಂಗವನ್ನು ಹುದುಗದಲ್ಲಿರಿಸುವುದಕ್ಕೂ ಮಂತ್ರಪಠನ ಬೇಕೆಂದು ಹೇಳುವ ಅಂದಿನ ಆ ಅನಾದಿಕಾಲದ ಅನಾದಿ ವೀರಶೈವದ ಅರ್ಚನ ವಿಧಾನದ ಎತ್ತರ ಮತ್ತು ಪರಿಪೂರ್ಣತೆ ಅರ್ಥವಾಗುತ್ತದೆ. ವೀರಶೈವ ವಿಧಾನ ಅಂದೇ ಎಲ್ಲ ಬಗೆಯಲ್ಲಿ ಪರಿಪೂರ್ಣವಾಗಿತ್ತು. ಯಾವ ಅರೆ ಕೊರೆಯಿಲ್ಲದಿತ್ತು.

ಇದನ್ನು ಮಹಾರ್ಚನವೆಂದು ಮಹಾಫಲದಾಯಕವೆಂದು ಇದರಿಂದ ಪುನರ್ಜನ್ಮವಿಲ್ಲೆಂದು ಹೇಳಲಾಗಿದೆ.

ಮಹಾಪೂಜೆಯಾದ ಬಳಿಕ ಗುರುಪೂಜೆ ಆಗಬೇಕು. ಇಲ್ಲವಾದರೆ ಲಿಂಗಪೂಜೆ ಫಲಿಸದು.

"ದೇವೇಶಿ ಗುರುಪೂಜಾಯಾಂ ವಿಶೇಷಃ ಕಥ್ಯತೇ ಶ್ರುಣು
ಪಾದ್ಯಾರ್ಘ್ಯಾಚಮನಾಖ್ಯಾನಿ ತ್ಯಾಗಜ್ಞಾನಾದಿಕಾನಿ ಚ
ನ ವಿದ್ಯಂತೇಽತ್ರ ಪಾತ್ರಾಣಿ ಪಾತ್ರದ್ವಿತಯ ಮೇವ ಚ ।
ಶಿವಕುಂಭಂ ಚ ಸಾಮಾನ್ಯಮರ್ಘ್ಯಪಾತ್ರಂ ಚ ವಿದ್ಯತೇ
ಶಿಷ್ಟಂ ಸರ್ವಂ ಸಮಂ ಪ್ರೋಕ್ತಂ ಕಿಮತಃ ಶ್ರೋತುಮಿಚ್ಛಸಿ ? ॥"

ಓ ದೇವಿ, ಲಿಂಗಪೂಜಾನಂತರ ಮಾಡುವ ಗುರುಪೂಜೆ ಅಂದರೆ ಗುರುಪಾದ ಪೂಜೆ ವಿಶೇಷವಾಗಿದೆ. ಇದಕ್ಕೆ ಲಿಂಗಪೂಜೆಗೆ ಬೇಕಾದಷ್ಟು ಸಾಮುಗ್ರಿಗಳು ಪಾತ್ರೆಗಳು ಬೇಕಾಗುವುದಿಲ್ಲ. ಒಂದು ಲೋಟ, ಉದ್ಧರಣೆ ಇದ್ದರೆ ಸಾಕು. ಬೇರೆ ಪಾತ್ರೆಗಳಾಗಲಿ ಪಾದ್ಯಾದಿಗಳಾಗಲಿ ಬೇಕಾಗುವುದಿಲ್ಲ.

ಉಳಿದ ಪತ್ರ ಪುಷ್ಪ ಗಂಧ ಅಕ್ಷತೆ ಧೂಪ ದೀಪಾದಿಗಳು ಬೇಕಾಗುತ್ತವೆ. ಈ ಪೂಜೆಯಿಂದ ಸರ್ವೋತ್ಕೃಷ್ಟವಾದ ಚಿನ್ಮಯವಾದ ಪಾದೋದ-ಪ್ರಸಾದಗಳು ಪ್ರಾಪ್ತಿಸುತ್ತವೆ. ಇದಕ್ಕಿಂತ ಫಲ ಪ್ರಾಪ್ತಿ ವೀರಶೈವರಿಗೆ ಬೇರೊಂದಿಲ್ಲ. ಇದುವೆ ಪರಮ ಪ್ರಾಪ್ತಿ.

— ೮ —

ಸರ್ವಾನುಗ್ರಹದಲ್ಲಿ ತತ್ಪರನಾದ ಜಗದೀಶ್ವರನೆ, ನೀವು ನಿರೂಪಿಸಿದ ವೀರಶೈವ ಪೂಜಾವಿಧಾನ ಉತ್ಕೃಷ್ಟವಾದುದು. ವೇದ ಮಂತ್ರ ಸಮನ್ವಿತವಾಗಿರುವುದರಿಂದ ವೇದಾಧಿಕಾರಿಗಳಿಗೆ ಚನ್ನಾಗಿ ಅನುಷ್ಠೇಯವಾದುದು. ಅದನ್ನು ನೀವು ಪ್ರಕಾಶಗೊಳಿಸಿದಿರಿ. ಇನ್ನು ಸ್ತ್ರೀಯರು ಯಾವ ವಿಧಾನದಿಂದ ಕೃತಾರ್ಥರಾಗುವರೆಂಬುದನ್ನು ಬೋಧಿಸುವುದೆಂದು ಭವಾನಿಯು ಕೇಳುವಳು. ಅದಕ್ಕೆ ಭವಹರನು ಹೀಗೆ ಹೇಳುವನು :

ಓ ಮಹಾದೇವಿ, ತಾಂತ್ರಿಕ (ಆಗಮಿಕ) ಪೂಜಾಕ್ರಮವನ್ನು ಹೇಳುವೆನು. ಅದರ ಅನುಷ್ಠಾನದಿಂದ ಸರ್ವರು (ಸ್ತ್ರೀ ಪುರುಷರು) ಸರ್ವಾರ್ಥಭಾಜನರಾಗುವರು. ತಾಂತ್ರಿಕ ಪೂಜೆ ವೈದಿಕ ಪೂಜೆಗಿಂತ ಕಡಿಮೆಯೇನಲ್ಲ; ಅವರಿವರೆಂಬುದಿಲ್ಲ.

"ವಿದ್ಯಾಸು ಶ್ರುತಿರುತ್ಕೃಷ್ಟಾ ರುದ್ರೈಕಾದಶಿನೀ ಶ್ರುತೌ
ತತ್ರ ಪಂಚಾಕ್ಷರಸ್ತತ್ರ ಶಿವ ಇತ್ಯಕ್ಷರದ್ವಯಂ ।...
ಮದೀಯ ಮೂಲ ಮಂತ್ರೇಣ ಪೂಜನಂ ಸರ್ವತೋ ವರಂ
ಅಥವಾ ತಾಂತ್ರಿಕೈರ್ಮಂತ್ರೈರಪಿ ಪೂಜಾ ವಿಶಿಷ್ಯತೇ ।....
ಭಕ್ತಿಲಭ್ಯೋಽಸ್ಮ್ಯಹಂ ಯಸ್ಮಾದಭಕ್ತ್ಯಾ ಪೂಜನಂ ವೃಥಾ
ತನ್ಮಂತ್ರಾಸ್ತಾಂತ್ರಿಕಾ ದೇವಿ ಪೂಜಾಯಾಮುತ್ತಮೋತ್ತಮಾಃ ॥
ಸರ್ವೇಷಾಮಧಿಕಾರೋಽಸ್ತಿ ತಾಂತ್ರಿಕೇಷು ವರಾನನೇ
ವೈದಿಕಾನಾಂ ತಥಾನ್ಯೇಷಾಂ ಸ್ತ್ರೀಣಾಂ ಪುಂಸಾಂ ಚ ಸುವ್ರತೇ ॥"

ವಿದ್ಯೆಗಳಲ್ಲಿ ಶ್ರುತಿ (ವೇದ) ಉತ್ತಮ. ಶ್ರುತಿಯಲ್ಲಿ ರುದ್ರೈಕಾದಶಿ ಅಂದರೆ ಏಕಾದಶ ರುದ್ರ ಉತ್ತಮ. ರುದ್ರೈಕಾದಶಿಯಲ್ಲಿ ಪಂಚಾಕ್ಷರ ಮಂತ್ರ ಉತ್ತಮ. ಪಂಚಾಕ್ಷರಮಂತ್ರದಲ್ಲಿ 'ಶಿವ' ಎಂಬೆರಡು ಅಕ್ಷರ ಉತ್ತಮ.

ಇವೆರಡು ಬೀಜಾಕ್ಷರ ! ಇದುವೆ ಮೂಲಮಂತ್ರ. ಇದನ್ನು ಪಠಿಸುತ್ತ ಮಾಡುವ ಪೂಜೆ ಸರ್ವಕ್ಕೂ ಉತ್ತಮ. ಇಲ್ಲವೆ ತಾಂತ್ರಿಕ (ಆಗಮಿಕ) ಮಂತ್ರಗಳಿಂದ ಮಾಡುವ ಪೂಜೆಯೂ ವಿಶೇಷ ! ಶಿವನು ಭಕ್ತಿ ಪ್ರಿಯನು, ಭಕ್ತಿ ಲಭ್ಯನು. ಭಕ್ತಿಯಿಂದ ಮಾಡುವ ಪೂಜೆಯೇ ಪೂಜೆ, ಭಕ್ತಿಯಿಲ್ಲದ ಪೂಜೆ ವ್ಯರ್ಥ. ಭಕ್ತಿ ಪೂಜೆಯಲ್ಲಿ ತಾಂತ್ರಿಕ ಮಂತ್ರಗಳು ಉತ್ತಮೋತ್ತಮ.

ಓ ಗಿರಿಜೆ, ತಾಂತ್ರಿಕ ಮಂತ್ರ ಪೂಜೆಗಳಲ್ಲಿ ವೈದಿಕರಿಗೂ ಅವೈದಿಕರಿಗೂ ಸ್ತ್ರೀ ಪುರುಷರಿಗೂ ಸರ್ವರಿಗೂ ಅಧಿಕಾರವಿರುತ್ತದೆ. ಇಲ್ಲಿ ಅವರಿವರೆಂಬ ಭೇದವಿಲ್ಲ ಇಲ್ಲಿ ಇರಬೇಕಾದ ಅರ್ಹತೆಯೆಂದರೆ ಭಕ್ತಿಯೊಂದೆ ! ಭಕ್ತಿಗೆ ಹೆಣ್ಣು ಗಂಡೆಂಬ ಭೇದವಿಲ್ಲ. ವೈದಿಕರು ಅವೈದಿಕರು ಎಂಬ ಭೇದವಿಲ್ಲ. "ವೈದಿಕೋಽಪಿ ಚ ಸಂಯುಕ್ತೈಸ್ತಾಂತ್ರಿಕೈರಪಿ ಪೂಜಯೇತ್ ।" ವೈದಿಕನೂ ಸಹ ತಾಂತ್ರಿಕ ಮಂತ್ರಗಳೊಡನೆ ವಿಧಾನಗಳೊಡನೆ ಲಿಂಗಪೂಜೆಯನ್ನಾಚರಿಸಬೇಕು.

ಸಚ್ಚಿದಾನಂದ ಸ್ವರೂಪವಾಗಿದೆ ವೀರಶೈವೇಷ್ಟಲಿಂಗ. "ಚಿದ್ರೂಪ ಜಗದಾಧಾರ ಸ್ಥೂಲ ಸೂಕ್ಷ್ಮ ಪರಾತ್ಪರ !" ಎಂದಿದೆ ಕಾರಣಾಗಮ. ಸ್ಥೂಲವಾಗಿ ಇಷ್ಟಲಿಂಗ, ಸೂಕ್ಷ್ಮವಾಗಿ ಪ್ರಾಣಲಿಂಗ, ಪರಾತ್ಪರವಾಗಿ ಭಾವಲಿಂಗವಾಗಿದೆ. ಈ ತ್ರಿವಿಧಾತ್ಮಕಲಿಂಗ ಸ್ವರೂಪವನ್ನು ಕಾರಣಾಗಮ ಹೀಗೆ ನಿರೂಪಿಸಿದೆ :

"ಮಾಂಗಲ್ಯ ಹೇತವೇ ಸರ್ವಮಂಗಲಾಲಿಂಗಿತಾತ್ಮನೇ
ಮಂಗಲಾರ್ಥಾಭಿಧಾನಾಯ ಮಹಾದೇವಾಯ ಮಂಗಲಂ
ಇಷ್ಟಲಿಂಗಸ್ವರೂಪಾಯಾಭೀಷ್ಟದಾಯಾಸ್ತು ಮಂಗಲಂ ।
ಪ್ರಾಣೇಷು ಚ ಮನೋಮಧ್ಯೇ ಜ್ಯೋತಿರ್ಲಿಂಗ ಸ್ವರೂಪಿಣೇ
ಪ್ರಾಣಗ್ರಂಥಿ ಸ್ವರೂಪಾಯ ಪ್ರಾಣಲಿಂಗಾಯ ಮಂಗಲಂ ।
ಭಾವಗ್ರಾಹ್ಯಾಯ ಪೂರ್ಣಾಯ ಭಾವಾಭಾವೈಕಹೇತವೇ
ಕಲಾಸರ್ಗಕೃತೇ ತುಭ್ಯಂ ಭಾವಲಿಂಗಾಯ ಮಂಗಲಂ ॥"

ಇಷ್ಟಲಿಂಗವು ಸರ್ವಮಂಗಲ ಸಂಗಿಯಾಗಿ ಮಾಂಗಲ್ಯ ಕಾರಣವಾಗಿದೆ. ಮಂಗಲಾರ್ಥ ನಿರೂಪಣ ನಾಮವುಳ್ಳದಾಗಿದೆ. ಮಹಾದೇವ ಸ್ವರೂಪವೂ ಅಭೀಷ್ಟಪ್ರದವೂ ಆಗಿ ಇಷ್ಟಲಿಂಗವೆನಿಸಿದೆ. ಮಂಗಲವೆಂದರೆ ಒಳಿತು: ಇಷ್ಟ

ಪ್ರಾಣಲಿಂಗ ಸ್ವರೂಪಾಯ ಪ್ರಾಣಲಿಂಗಾಯ ಮಂಗಲಂ ।
ಭಾವಗ್ರಾಹ್ಯಾಯ ಪೂರ್ಣಾಯ ಭಾವಾಭಾವೈಕ ಹೇತವೇ
ಕಲಾಸರ್ಗ ಕೃತೇ ತುಭ್ಯಂ ಭಾವಲಿಂಗಾಯ ಮಂಗಲಂ ॥"

ಕಾರಣಾಗಮದ ಈ ಮಂತ್ರಚೇತನವುಳ್ಳ ಈ ಶ್ಲೋಕಗಳನ್ನು ಇಷ್ಟಲಿಂಗ ಈಚಿನದೆಂದು ವಾದಿಸುವ ಸಂಕುಚಿತ ದೃಷ್ಟಿಯುಳ್ಳವರು ವಿಶಾಲದೃಷ್ಟಿಯನ್ನು ತಂದುಕೊಂಡು ಸ್ಮರಿಸಬೇಕು.



ವೀರಶೈವಕ್ಕೂ ಶೈವಕ್ಕೂ ಷಡ್‌ದರ್ಶನಗಳಿಗೂ ಮೂಲ ಪಶುಪತಿಮತ. ಇದು ಪ್ರಾಚೀನವೂ ಅಹುದು; ಪ್ರತಿಭಾನ್ವಿತವೂ ಅಹುದು. ತಾತ್ವಿಕ ಸೈದ್ಧಾಂತಿಕ ವಿಕಾಸ ಪಶುಪತಿಮತದಿಂದ ಪ್ರಾರಂಭವಾಗುತ್ತದೆ. ಅಂತಹ ಪಶುಪತಿ ಮತದ ಉತ್ಪಾದಕ ಮತ್ತು ಸಂಸ್ಥಾಪಕ ಅನಾದಿ ರುದ್ರದೇವನಲ್ಲದೆ ಬೇರೆ ಯಾರು ಇಲ್ಲ. ಮಾನವೀಯ ಸಂಸ್ಕೃತಿಯ ಕೇಂದ್ರನೂ ರುದ್ರನೇ ಆಗಿದ್ದಾನೆ. ಪಶುಗಳಂತೆ ವರ್ತಿಸುತ್ತಿದ್ದ ಮಾನವರನ್ನು ಪತಿಧರ್ಮಕ್ಕೆ ಹಚ್ಚಿದಾತ ರುದ್ರದೇವ! ತ್ರಿಮಲವೆಂಬ ತ್ರಿವಿಧ ಪಾಶಗಳನ್ನು ಪರಿಹರಿಸುವ ತ್ರಿವಿಧ ದೀಕ್ಷೆಗಳನ್ನು ಕಂಡಾತ ರುದ್ರದೇವ!

— ಕೃತಿಕರ್ತರು